ಹೊರಬರುತ್ತವೆ ಎಂಬುದು ಕುತೂಹಲಕರವಾದ ಪ್ರಶ್ನೆ. ಇನ್ನೂರು ವರುಷಗಳ ಕೆಳಗೆ ಒಂದು ಜಾಗದಲ್ಲಿ ಹತ್ತಾರು ಮನೆಗಳು, ದೇವಾಲಯಗಳು ಇದ್ದವೆಂದು ಭಾವಿಸೋಣ. ಕಾಲಕ್ರಮದಲ್ಲಿ ಮನೆಗಳು, ದೇವಾಲಯಗಳು ಬಿದ್ದು ಹೋಗಿ ಒಂದು ಸಣ್ಣ ಉಬ್ಬು ಪ್ರದೇಶವಾಗುತ್ತದೆ. ಇವು ಬಿದ್ದುಹೋದಾಗ ಇದರಲ್ಲಿನ ಪಾತ್ರೆಪಡಗ ಮುಂತಾದ ವಸ್ತುಗಳು ಅಲ್ಲಿಯೇ ಬಿದ್ದಿರುತ್ತವೆ; ಇದಾದ ಸ್ವಲ್ಪ ಕಾಲದ ಮೇಲೆ ಅಲ್ಲಿ ಮತ್ಯಾರೋ ಜನಗಳು ಬಂದು ಈ ಗುಡ್ಡದ ಮೇಲೆ ತಮ್ಮ ಮನೆಗಳನ್ನು ಕಟ್ಟುತ್ತಾರೆ. ಕಾಲಕ್ರಮದಲ್ಲಿ ಇವೂ ನಶಿಸಿಹೋಗುತ್ತವೆ, ಮಣ್ಣಿನಲ್ಲಿ ಒಂದಾಗುತ್ತವೆ. ಅಂದರೆ ಮೊದಲು ಬಿದ್ದು ಹೋಗಿದ್ದ ಮನೆಗಳ ಮೇಲೆ, ಈ ಎರಡನೆಯ ಸಾರಿ ಬಿದ್ದ ಅವಶೇಷಗಳು ಸೇರುತ್ತವೆ. ಹೀಗೆ ಹತ್ತಾರು ಸಾರಿ ಭೂಮಿಯಲ್ಲಿ ಈ ರೀತಿಯ ಬದಲಾವಣೆಗಳುಂಟಾದಾಗ, ಅತ್ಯಂತ ಪ್ರಾಚೀನ ವಸ್ತುಗಳು ಅತ್ಯಂತ ಕೆಳಭಾಗದಲ್ಲೂ, ಇತ್ತೀಚಿನ ವಸ್ತುಗಳು ಭೂಮಿಯ ಮೇಲ್ಮೈಗೆ ಸಮೀಪವಾಗಿಯೂ ಇರುತ್ತವೆ. ಇದರಿಂದ ಪುರಾತತ್ವಜ್ಞನು ಭೂಮಿಯನ್ನು ಉತ್ಖನನ ಮಾಡಿದಾಗ, ಪ್ರಾಚೀನ ಕಾಲದ ಅವಶೇಷಗಳನ್ನು ಹೊರತೆಗೆಯುತ್ತಾನೆ. ಈ ರೀತಿ ಉತ್ಖನನ ಮಾಡಲು ಅನೇಕ ವೈಜ್ಞಾನಿಕ ಮಾರ್ಗಗಳಿವೆ. ಆ ಮಾರ್ಗಗಳನ್ನು ಅನುಸರಿಸಿದರೆ ಪ್ರತಿಯೊಂದು ಕಾಲದ ಅವಶೇಷಗಳನ್ನೂ ಹೊರತೆಗೆಯಬಹುದು. ಆದುದರಿಂದ ಪುರಾತತ್ವದಲ್ಲಿ ಉತ್ಖನನದ ಪಾತ್ರ ಮಹತ್ವದ್ದು. ಈ ರೀತಿ ಪುರಾತತ್ವಜ್ಞನು ಕರ್ನಾಟಕದಲ್ಲಿ ಏನು ಶೋಧನೆ ನಡೆಸಿದ್ದಾನೆ ಎಂಬುದನ್ನು ಮುಂದೆ ತಿಳಿಯೋಣ.

## ವಿವಿಧ ಸಂಸ್ಥೆಗಳು

ಅಂದಿನ ಮೈಸೂರು ಸರಕಾರವು ೧೮೮೪ರಲ್ಲಿ ಲೂಯಿ ರೈಸ್ ಅವರನ್ನು ಪುರಾತತ್ವ ಇಲಾಖೆಯನ್ನು ನೋಡಿಕೊಳ್ಳಲು ನಿಯಮಿಸಿತು. ಆರು ವರ್ಷಗಳ ನಂತರ ಈ




ನೇಮಕಗೊಂಡರು. ಅವರು ತಮ ... ಯಲ್ಲಿ ಸುಮಾರು ಒಂಬತ್ತು ಸಾ ... ಭದ್ರವಾದ ತಳಹದಿಯನ್ನು ಹಾಕಿದ ... ವಬಹದ್ದೂರ್ ಆರ್. ನರಸಿಂಹಾಚಾರ ... ಷ ಗಮನಕೊಟ್ಟರು. ಅನಂತರ ಪುರಾತತ್ವ ಇಲಾಖೆಯನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ

ವರ್ಗಾಯಿಸಲಾಯಿತು. ಅಲ್ಲಿ ಎಂ. ಎಚ್. ಕೃಷ್ಣ ಅವರು ನಿರ್ದೇಶಕರಾದರು. ಇವರು ಶಾಸನಗಳ ಅಧ್ಯಯನದ ಜೊತೆಗೆ ನಾಣ್ಯಗಳ ಅಧ್ಯಯನ, ಉತ್ಖನನ ಮತ್ತು ವಾಸ್ತುಶಿಲ್ಪದ ಅಧ್ಯಯನವನ್ನೂ ಮಾಡಿದರು. ಅನಂತರ ನಿರ್ದೇಶಕ ರಾದ ಡಾ. ಶೇಷಾದ್ರಿಯವರು ಇತಿಹಾಸಪೂರ್ವ ಪುರಾತತ್ವಕ್ಕೆ ವಿಶೇಷ ಗಮನಕೊಟ್ಟು ಅನೇಕ ನೆಲೆಗಳಲ್ಲಿ ಉತ್ಖನನ ನಡೆಸಿದರು.

ಭಾರತ ಸರಕಾರದ ಆಶ್ರಯದಲ್ಲಿಯೂ ಕರ್ನಾಟಕದಲ್ಲಿ ಪುರಾತತ್ವ ಶೋಧನೆಯ ಕಾರ್ಯ ಮುಂದುವರೆಯುತ್ತ ಬರುತ್ತಿದೆ. ಉತ್ತರ ಕರ್ನಾಟಕ ದಲ್ಲಿ ಫ್ಲೀಟರು ವಿಶೇಷವಾಗಿ ಕೆಲಸಮಾಡಿ ಸಾವಿರಾರು ಶಾಸನಗಳನ್ನು ಬೆಳ ಕಿಗೆ ತಂದರು. ಭಾರತ ಸರಕಾರದ ಪುರಾತತ್ವ ಇಲಾಖೆಯು ಇತ್ತೀಚೆಗೆ ಬೆಂಗ ಳೂರಿನಲ್ಲಿ ಒಂದು ಶಾಖೆಯನ್ನು ಪ್ರಾರಂಭಿಸಿದೆ. ಈ ಶಾಖೆಯ ನೇತೃತ್ವ ದಲ್ಲಿ ಹೆಚ್ಚು ಕಡಿಮೆ ಕರ್ನಾಟಕದ ಎಲ್ಲ ಜಿಲ್ಲೆಗಳೂ ಸೇರಿವೆ. ಶ್ರೀ ಎಸ್.ಆರ್. ರಾವ್ ಅವರ ನಿರ್ದೇಶನದಲ್ಲಿ ಹಂಪೆಯಲ್ಲಿ ಉತ್ಖನನಗಳು ನಡೆಯುತ್ತಿವೆ.

ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಪುರಾತತ್ವದ ವ್ಯಾಸಂಗ ಮತ್ತು ಸಂಶೋಧನೆಯು ನಡೆಯುತ್ತಲಿದೆ. ಮೈಸೂರು ವಿಶ್ವ ವಿದ್ಯಾನಿಲಯದ ಪುರಾತತ್ವ ವಿಭಾಗವು ಬನವಾಸಿ, ಕೊಪ್ಪ ಮತ್ತು ಹೆಗ್ಗಡೆ ಹಳ್ಳಿಗಳಲ್ಲಿ ಉತ್ಖನನಗಳನ್ನು ನಡೆಸಿದೆ. ಕರ್ನಾಟಕ ವಿಶ್ವವಿದ್ಯಾನಿಲಯವು ವಡಗಾಂವ್ ಮಾಧವಪುರದಲ್ಲಿ ಉತ್ಖನನ ನಡೆಸಿದೆ. ಅಷ್ಟೆ ಅಲ್ಲದೆ ಈ ಎರಡು ವಿಶ್ವವಿದ್ಯಾನಿಲಯಗಳೂ ವಾಸ್ತುಶಿಲ್ಪ ಮತ್ತು ಶಾಸನಶಾಸ್ತ್ರಗಳ ಲ್ಲಿಯೂ ಸಂಶೋಧನೆ ನಡೆಸುತ್ತಿವೆ.

ಕರ್ನಾಟಕದ ಪುರಾತತ್ವ ವಿಷಯವನ್ನು ಕುರಿತು ಹೇಳುವಾಗ ಪುಣೆಯ ಡೆಕ್ಕನ್ ಕಾಲೇಜನ್ನು ಮರೆಯುವ ಹಾಗಿಲ್ಲ. ಕರ್ನಾಟಕದ ಹೊರಗಡೆ ಇದ್ದರೂ ಈ ಸಂಸ್ಥೆಯು ಕರ್ನಾಟಕದ ಇತಿಹಾಸಪೂರ್ವ ಪುರಾತತ್ವಕ್ಕೆ ಸಲ್ಲಿ ಸಿರುವ ಮತ್ತು ಇಂದಿಗೂ ಸಲ್ಲಿಸುತ್ತಿರುವ ಸೇವೆಯು ಬಹು ಗಮನಾರ್ಹ ವಾದುದು. ನಾಲ್ಕಾರು ಉತ್ಖನನಗಳನ್ನು ಮಾಡಿ ಕರ್ನಾಟಕದ ಶಿಲಾಯುಗ ಗಳ ಮತ್ತು ಲೋಹಯುಗಗಳ ಸಂಸ್ಕೃತಿಯನ್ನು ಸ್ಪಷ್ಟಪಡಿಸುವಲ್ಲಿ ಡೆಕ್ಕನ್ ಕಾಲೇಜ್ ಮಹತ್ವದ ಪಾತ್ರ ವಹಿಸಿದೆ. ಈ ಮೇಲೆ ಹೇಳಿದ ಸಂಸ್ಥೆಗಳು ಮತ್ತು ವಿದ್ವಾಂಸರು ಮಾತ್ರವಲ್ಲದೆ, ಸ್ಥಳೀಯವಾಗಿ ಅನೇಕ ಸಂಸ್ಥೆಗಳು ಮತ್ತು ವಿದ್ವಾಂಸರು ಕರ್ನಾಟಕ ಪುರಾತತ್ವದ ವಿಷಯವನ್ನು ಕುರಿತು

ಸಂಶೋಧನೆ ನಡೆಸುತ್ತಲಿದ್ದಾರೆ. ಈ ಎಲ್ಲ ಸಂಸ್ಥೆಗಳ ಮತ್ತು ವಿದ್ವಾಂಸರ ಸತತ ಪರಿಶ್ರಮವಾಗಿ ಕರ್ನಾಟಕ ಪುರಾತತ್ವವನ್ನು ಕುರಿತು ನಾವು ಹೆಮ್ಮೆ ಪಟ್ಟುಕೊಳ್ಳಬಹುದಾದಷ್ಟು, ಇತರ ಪ್ರಾಂತಗಳಿಗಿಂತ ನಾಲ್ಕು ಪಟ್ಟು ವಿಶೇಷ ವಾದ ಅಧ್ಯಯನ ಮತ್ತು ಸಂಶೋಧನೆ ನಡೆದಿದೆ.

## ಇತಿಹಾಸಪೂರ್ವ ಪುರಾತತ್ವ

ಕೆಲವು ಲಕ್ಷ ವರ್ಷಗಳ ಹಿಂದಿನ ಮಾತು. ಕರ್ನಾಟಕದಲ್ಲಿ ಮೊಟ್ಟ ಮೊದಲಿಗೆ ಮಾನವನು ಕಲ್ಲಿನ ಆಯುಧಗಳನ್ನು ಉಪಯೋಗಿಸಿಕೊಂಡು ಪ್ರಾಣಿಗಳನ್ನು ಕೊಂದು ಅವುಗಳ ಮಾಂಸವನ್ನು ತಿಂದು ಜೀವಿಸುತ್ತಿದ್ದನು. ಈ ಮೊದಲನೆಯ ಹಂತವನ್ನು ಪೂರ್ವ ಶಿಲಾಯುಗವೆಂದು ಕರೆಯುತ್ತೇವೆ. ಈ ಕಾಲದ ಕಲ್ಲಿನ ಆಯುಧಗಳನ್ನು ಇತಿಹಾಸಪೂರ್ವ ಪುರಾತತ್ವದ ಪಿತಾ ಮಹನೆನಿಸಿದ ರಾಬರ್ಟ್ ಬ್ರೂಸ್‌ಫುಟ್ ಬೆಳಕಿಗೆ ತಂದನು. ರಂಗನಾಥಪುರ, ಕರಡಿಗುಡ್ಡ, ತಾಳ್ಯ, ಕಡೂರು, ನಿಡಘಟ್ಟ, ನ್ಯಾಮತಿ, ಕಿಬ್ಬನಹಳ್ಳಿ, ಬಾಗಲ ಕೋಟೆ, ತುಂಗಭದ್ರಾನದಿಯ ದಡದಲ್ಲಿ, ಬಿಜಾಪುರ, ರಾಯಚೂರು ಜಿಲ್ಲೆ ಗಳಲ್ಲಿ ಅನೇಕವು, ಮೆಣಸಗಿ, ಖ್ಯಾಡ್, ಹಿರೇಮೂಲಂಗಿ, ಆಲೂರು, ತಮ್ಮಿನ ಹಾಳ್ ಮುಂತಾದ ಕಡೆಗಳಲ್ಲಿ ಪೂರ್ವಶಿಲಾಯುಗದ ಮಾನವನು ಉಪ ಯೋಗಿಸಿದ ಕಲ್ಲಿನ ಆಯುಧಗಳು ಹೇರಳವಾಗಿ ದೊರಕಿವೆ. ಕಿಬ್ಬನಹಳ್ಳಿ ಯಂತೂ ಆ ಕಾಲದ ಮಾನವನ ನೆಲೆಯೇ ಆಗಿದ್ದಿತು. ಈ ಕಾಲದ ಆಯುಧ ಗಳು ವಿಶೇಷವಾಗಿ ಕಲ್ಲಿನ ಕೈಗೊಡಲಿಗಳು. ಇವುಗಳು ಅಬ್ಬೆವೆಲ್ಲಿಯನ್ ಮತ್ತು ಅಷೂಲಿಯನ್ ಸಂಪ್ರದಾಯಕ್ಕೆ ಸೇರಿದ ಕೈಗೊಡಲಿಗಳು. ಆಹಾರ ಸಂಗ್ರಹವೇ ಈ ಮಾನವನ ಮುಖ್ಯ ಗುರಿಯಾಗಿದ್ದಿತು. ಪ್ರಕೃತಿಯಲ್ಲಿ ದೊರ ಕುವ ಗೆಡ್ಡೆಗೆಣಸುಗಳನ್ನು ತಿನ್ನುವುದರ ಜೊತೆಗೆ ತಾನು ಸಾಯಿಸಿದ ಪ್ರಾಣಿ ಗಳ ಮಾಂಸವನ್ನೂ ಈ ಕಾಲದ ಮಾನವ ತಿನ್ನುತ್ತಿದ್ದನು. ಬೇಟೆಯಾಡಿದ ಪ್ರಾಣಿಗಳ ಚರ್ಮದಿಂದ ಕೊರೆಯುವ ಚಳಿಯನ್ನು ನಿವಾರಿಸಿಕೊಳ್ಳುತ್ತಿದ್ದಿರ ಬಹುದು. ಬಹುಶಃ ಗುಹೆಗಳಲ್ಲಿ ವಾಸಮಾಡುತ್ತಿದ್ದಿರಬೇಕು. ಆದರೆ ಈ ಕಾಲದ ಗುಹೆಗಳು ನಮಗೆ ಈವರೆಗೆ ದೊರೆಕಿಲ್ಲ. ಒಟ್ಟನಲ್ಲಿ ದುಷ್ಟಮೃಗ ಗಳೊಡನೆ ಜೀವನ ಸಾಗಿಸಬೇಕಾಗಿದ್ದ ಈ ಮಾನವನ ಜೀವನ ವಿಧಾನ ಕಷ್ಟ ಸಾಧ್ಯವಾಗಿರುತ್ತಿದ್ದಿತು. ಜೀವಿತದ ಹೆಚ್ಚು ಭಾಗವನ್ನೆಲ್ಲ ಬೇಟೆ-ಆಹಾರ

ಸಂಪಾದನೆಯಲ್ಲೇ ಕಳೆಯಬೇಕಾಗಿದ್ದಿತು. ಇವನ ಆಯುಧಗಳೂ ಬಹು ಒರಟಾದವು. ಕಾಲಕ್ರಮದಲ್ಲಿ ಅವನು ಸುಧಾರಿತ ಆಯುಧಗಳನ್ನು ತಯಾರು ಮಾಡಲು ಮತ್ತು ಅವುಗಳನ್ನು ಬಳಸಲು ಕಲಿತನು. ಇದುವರೆವಿಗೂ ಈ ಕಾಲದ ಮಾನವನ ಮೂಳೆಗಳು, ತಲೆಬುರುಡೆಗಳು ಮುಂತಾದ ಅವಶೇಷಗಳು ದೊರೆತಿಲ್ಲವಾದುದರಿಂದ, ಕರ್ನಾಟಕದ ಪ್ರಾಚೀನತಮ ಮಾನವ ಯಾವ ಗುಂಪಿನವನು; ನೋಡಲು ಹೇಗಿದ್ದನು ಎಂಬುದನ್ನು ಹೇಳಲು ಸಾಧ್ಯವಿಲ್ಲವಾಗಿದೆ. ಕಲ್ಲಿನ ಆಯುಧಗಳ ಸಾಮ್ಯತೆ ಮತ್ತು ಸಂಸ್ಕೃತಿಯ ಸಾಮ್ಯತೆಯನ್ನು ಗಮನಿಸಿದರೆ ಕರ್ನಾಟಕದ ಈ ಮಾನವ ಆಫ್ರಿಕದ ಮಾನವ ಸಂತತಿಗೆ ಸೇರಿದವನಾಗಿರಬೇಕೆಂದು ಊಹಿಸಬಹುದು.

## ಮಧ್ಯಶಿಲಾಯುಗ

ಕಾಲಕ್ರಮದಲ್ಲಿ ವಾತಾವರಣ ಮತ್ತು ಇತರ ಬದಲಾವಣೆಗಳಿಗನುಸಾರವಾಗಿ ಕರ್ನಾಟಕದ ಪೂರ್ವಶಿಲಾಯುಗ ಸಂಸ್ಕೃತಿಯಲ್ಲೂ ಬದಲಾವಣೆ ತಲೆದೋರಿ, ಹೊಸ ಸಂಸ್ಕೃತಿಯು ಬೆಳೆಯಿತು. ಇದನ್ನು ಮಧ್ಯಶಿಲಾಯುಗ ಸಂಸ್ಕೃತಿ ಎಂದು ಕರೆಯುತ್ತೇವೆ. ಈ ಸಂಸ್ಕೃತಿಯು ಪ್ಲೈಸ್ಟೋಸೀನ್ ಅಂತ್ಯಕಾಲದಲ್ಲಿ ಬೆಳಕಿಗೆ ಬಂದಿತು. ಬದಲಾದ ಹವಾಗುಣದ ಕಾರಣದಿಂದ ದಟ್ಟ ಕಾಡುಗಳೂ, ಜಲಸ್ಥಾನಗಳೂ ಹೆಚ್ಚಾದವು. ಕಾಡಿನಲ್ಲಿ ತಮ್ಮಷ್ಟಕ್ಕೆ ಓಡಾಡುತ್ತಿದ್ದ ದೊಡ್ಡ ದೊಡ್ಡ ಪ್ರಾಣಿಗಳ ಸಂತತಿಯು ನಾಶವಾಗುತ್ತ ಬಂದಿತು. ಸಣ್ಣ ಆಕಾರದ ಹೊಸ ಪ್ರಾಣಿಗಳು ಹುಟ್ಟಿಕೊಂಡವು. ತನ್ನ ಹಳೆಯ ಆಯುಧಗಳು ಈ ಪ್ರಾಣಿಗಳನ್ನು ಬೇಟೆಯಾಡಲು ಉಪಯೋಗಕ್ಕೆ ಬರಲಿಲ್ಲವಾದುದರಿಂದ ಈ ಕಾಲದ ಮಾನವನು ಹೊಸ ರೀತಿಯ ಆಯುಧಗಳನ್ನು ತಯಾರು ಮಾಡಿಕೊಳ್ಳುವ ಅಗತ್ಯ ತಲೆದೋರಿತು. ದೊಡ್ಡ ಪ್ರಮಾಣದ ಒರಟಾದ ಕೈಗೊಡಲಿಗಳು ನಿಷ್ಪ್ರಯೋಜಕವಾದವು. ಅವುಗಳಿಗೆ ಬದಲಾಗಿ ಮೃದುವಾದ, ನಯವಾದ, ಉತ್ತಮ ಮಟ್ಟದ ಜಾಸ್ಪರ್, ಅಗೇಟ್ ಚೆರ್ಟ್ ಮುಂತಾದ ಕಲ್ಲುಗಳನ್ನು ಬಳಸಿ, ಅವುಗಳಿಂದ ಚೂಪಾದ ಸಣ್ಣಗಾತ್ರದ ಚಕ್ಕೆಗಳನ್ನು ತೆಗೆದು ಆಯುಧಗಳನ್ನು ತಯಾರಿಸಬೇಕಾಯಿತು. ಇವು ಸಣ್ಣ ಪ್ರಮಾಣದವುಗಳಾದರೂ, ಚೂಪಾದ ಆಯುಧಗಳಾದುದರಿಂದ ಮಾನವನಿಗೆ ಇವು ವಿಶೇಷ ಉಪಯುಕ್ತವಾದವು. ಈ ಚಿಕ್ಕ ಆಯುಧಗಳನ್ನು ಕೋಲು ಅಥವಾ ಮೂಳೆಗಳಿಗೆ ಸಿಕ್ಕಿಸಿ ಉಪಯೋಗಿಸಿದಾಗ ಇದರ ಉಪಯುಕ್ತತೆ

ಇನ್ನೂ ಹೆಚ್ಚಾದುದನ್ನು ಈ ಮಾನವ ಗಮನಿಸಿದ. ಆದುದರಿಂದ ಅವನ ಆಯುಧಗಳಲ್ಲಿ ವಿಶೇಷ ಬದಲಾವಣೆ ಉಂಟಾಗಿ ಮಧ್ಯಶಿಲಾಯುಗಕ್ಕೆ ನಾಂದಿ ಯಾಯಿತು.

ಈ ಸಣ್ಣ ಆಯುಧಗಳಿಂದ ಬಿಲ್ಲು ಮತ್ತು ಬಾಣಗಳ ಉಪಯೋಗವೂ ಹೆಚ್ಚಿತು. ಬೇಟೆಯಾಡುವುದು ಮೊದಲಿನಷ್ಟು ಶ್ರಮಕಾರಿಯಾಗಿರಲಿಲ್ಲ. ಸಣ್ಣ ಸೂಜಿಗಳಿಂದ, ಹೆರೆಯುವ ಆಯುಧಗಳಿಂದ ಈ ಮಾನವನು ಪ್ರಾಣಿಗಳ ಚರ್ಮವನ್ನು ಹದಮಾಡಿ ಉಡುಪಿಗಾಗಿ ಉಪಯೋಗಿಸಲು ಅನುಕೂಲ ವಾಯಿತು. ಬಹುಶಃ ಇದೇಕಾಲದಲ್ಲಿ ಮಾನವನು ಮೀನು ಹಿಡಿಯುವುದನ್ನು ರೂಢಿಸಿಕೊಂಡನು. ಒಟ್ಟಿನಲ್ಲಿ ಈ ಕಾಲದ ಆಯುಧಗಳು ಮಾನವನ ಜೀವನ ಕ್ರಮವನ್ನೇ ವಿಶೇಷವಾಗಿ ಬದಲಾಯಿಸಿದವು. ಈ ರೀತಿಯ ಆಯುಧಗಳು ಸಾಲವಡಗಿ, ತಮ್ಮಿನಹಾಳ್, ಅಂಗವಾಡಿ, ಹೆರೆಕಲ್, ಬೀಳಿಗಿ, ನಿಟ್ಟೂರು, ಸಂಗನಕಲ್ಲು, ಬ್ರಹ್ಮಗಿರಿ ಮುಂತಾದ ನೆಲೆಗಳಲ್ಲಿ ದೊರೆತಿವೆ. ಪ್ರಾಯಶಃ ಐವತ್ತುಸಾವಿರ ವರ್ಷಗಳ ಹಿಂದೆ ಈ ಸಂಸ್ಕೃತಿ ಪ್ರಚಲಿತವಾಗಿದ್ದಿತ್ತೆಂದು ಊಹಿಸಬಹುದು.

## ಅಂತ್ಯಶಿಲಾಯುಗ

ಮುಂದಿನ ಹಂತವೇ ಅಂತ್ಯ ಹಳೆಯಶಿಲಾಯುಗ. ವಾಯುಗುಣದಲ್ಲಿ ವಿಶೇಷ ಬದಲಾವಣೆಗಳುಂಟಾದವು. ತಂಪು ಕಡಿಮೆಯಾಗಿ ಉಷ್ಣ ಹೆಚ್ಚಾಯಿತು. ಸುಮಾರು ಹತ್ತುಸಾವಿರ ವರ್ಷಗಳ ಹಿಂದೆ ಈ ಬದಲಾವಣೆ ಉಂಟಾಯಿತು. ಕಲ್ಲಿನ ಆಯುಧಗಳು ಇನ್ನೂ ಹೆಚ್ಚಾಗಿ ಸುಧಾರಿಸಲ್ಪಟ್ಟವು. ಕೂರಲಗುಳ್ಳ ಚಕ್ಕೆಗಳಿಂದ ಚೂಪಾದ ಆಯುಧಗಳನ್ನು ಮಾಡುವುದು ವಿಶೇಷ ವಾಯಿತು. ಬಿಲ್ಲು ಬಾಣಗಳ ಉಪಯೋಗ ಹೆಚ್ಚಾಯಿತು. ಮೂಳೆಗಳಿಂದಲೂ ಆಯುಧಗಳನ್ನು ಮಾಡಲು ಮಾನವನು ಪ್ರಾರಂಭಿಸಿದನು. ಬೆಂಗಳೂರಿನ ಸುತ್ತಮುತ್ತ ಈ ರೀತಿಯ ಕಲ್ಲಿನ ಆಯುಧಗಳು ವಿಶೇಷವಾಗಿ ದೊರೆತಿವೆ. ಜಾಲಹಳ್ಳಿಯ ತಪ್ಪಲಿನಲ್ಲಿ ಸೂಕ್ಷ್ಮವಾದ ಈ ಕಾಲದ ಶಿಲಾಯುಧಗಳು ಮತ್ತು ಅವುಗಳನ್ನು ತಯಾರಿಸಿದ ನಂತರ ಉಳಿಯುವ ನಿರುಪಯುಕ್ತ ಚಕ್ಕೆಗಳು ಸಾಕಷ್ಟು ಸಂಖ್ಯೆಯಲ್ಲಿ ದೊರೆತಿವೆ. ಆದುದರಿಂದ ಈ ಮಾನವನು ಇಲ್ಲಿಯೇ ವಾಸವಾಗಿದ್ದು ಆಯುಧಗಳನ್ನು ತಯಾರುಮಾಡುವ ಕೇಂದ್ರವನ್ನು ಸ್ಥಾಪಿಸಿಕೊಂಡಿದ್ದನು ಎಂದು ತಿಳಿಯಬಹುದಾಗಿದೆ. ಬೆಂಗಳೂರು–ಆನೇಕಲ್ಲು ರಸ್ತೆ

ಯಲ್ಲಿರುವ ಸಿದ್ಧಾಪುರ ಮತ್ತು ಸೂಡಸಂದ್ರಗಳಲ್ಲೂ ಈ ರೀತಿಯ ಆಯುಧಗಳು ದೊರೆತಿವೆ. ರಾಯಚೂರು, ಬಿಜಾಪುರ, ಗುಲ್ಬರ್ಗ ಜಿಲ್ಲೆಗಳಲ್ಲಿ ಈ ಸಂಸ್ಕೃತಿಯ ಅನೇಕ ಸ್ಥಳಗಳು ಬೆಳಕಿಗೆ ಬಂದಿವೆ. ಚಾಕುಗಳು, ಬ್ಲೇಡುಗಳು, ಅರ್ಧಚಂದ್ರಾಕೃತಿಯ ಲೂನೇಟುಗಳು, ಬರೆಯುವ ಆಯುಧಗಳು ಇವುಗಳಲ್ಲಿ ವಿಶೇಷವಾಗಿವೆ. ಇವು ಬಹಳ ಸಣ್ಣ ಪ್ರಮಾಣದವು. ಅರ್ಧ ಅಂಗುಲದಿಂದ ಪ್ರಾರಂಭವಾಗಿ ಸುಮಾರು ಎರಡು ಅಂಗುಲ ಉದ್ದವಿರುವ ಆಯುಧಗಳೇ ಹೆಚ್ಚು. ಇವುಗಳಿಗೆ ಹರಿತವಾದ ಬ್ಲೇಡು ಇರುತ್ತದೆ. ಇಲ್ಲವೆ ಚೂಪಾದ ಮೊನೆ ಇರುತ್ತದೆ. ಇವುಗಳನ್ನು ನೋಡಿದರೆ ಇವು ಬೇಟೆಯಲ್ಲಿ ವಿಶೇಷ ಉಪಯೋಗಕ್ಕೆ ಬರುತ್ತಿದ್ದಂತೆ ತೋರುತ್ತದೆ. ಅಂದರೆ ಬೇಟೆಯೇ ಈ ಮಾನವನ ವಿಶೇಷ ಕಸುಬಾಗಿತ್ತೆಂದು ಹೇಳಬೇಕಾಗುತ್ತದೆ. ಗುಹೆಗಳಲ್ಲಿ ವಾಸಮಾಡುತ್ತಿದ್ದ ಈ ಜನಗಳು ಕಲೆಯ ಪರಿಚಯವನ್ನೂ ಹೊಂದಿದ್ದರು. ವಿಶೇಷವಾಗಿ ನೀರಿನ ವಸತಿ ಇರುವ ನೆಲೆಗಳನ್ನು ಇವರು ಆರಿಸಿಕೊಳ್ಳುತ್ತಿದ್ದರು, ಗೆಡ್ಡೆ, ಗೆಣಸು, ಜೇನು, ಮಾಂಸ ಇವರ ಮುಖ್ಯ ಆಹಾರ. ಒಟ್ಟಿನಲ್ಲಿ ಹೇಳುವುದಾದರೆ ಸಾಂಘಿಕ ಜೀವನದತ್ತ ಈ ಮಾನವ ಸಾಗುತ್ತಿದ್ದನು.

## ನೂತನ ಶಿಲಾಯುಗ

ಹಳೆಯ ಶಿಲಾಯುಗದ ನಂತರ ನಾವು ನೂತನ ಶಿಲಾಯುಗವನ್ನು ಪ್ರವೇಶಿಸುತ್ತೇವೆ. ನೂತನ ಅಥವಾ ನವಶಿಲಾಯುಗದ ಮಾನವನನ್ನು ಕರ್ನಾಟಕ ವಿಶೇಷವಾಗಿ ಆಕರ್ಷಿಸಿದ್ದಿತು. ಈ ಶಿಲಾಯುಗದ ಮುಖ್ಯ ಲಕ್ಷಣವೆಂದರೆ ಬಹು ಸುಧಾರಿತವಾದ ಕಲ್ಲಿನ ಆಯುಧ. ನಯವಾದ ಕಣಗಳಿಂದ ಕೂಡಿದ ಟ್ರಾಪ್ ಎನ್ನುವ ಕಲ್ಲಿನಿಂದಲೇ ಈ ಆಯುಧಗಳು ತಯಾರಾದವು. ಈ ಕಲ್ಲು ಕರ್ನಾಟಕದಲ್ಲಿ ಹೇರಳವಾಗಿ ದೊರೆಯುತ್ತದೆಯಾದುದರಿಂದ ನವಶಿಲಾಯುಗದ ಮಾನವನು ಕರ್ನಾಟಕವನ್ನು ತನ್ನ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡನು. ಈ ಆಯುಧಗಳು ಹಿಂದಿನ ಆಯುಧಗಳಂತೆ ಒರಟಾದುವಲ್ಲ. ಕಲ್ಲಿನ ಮೇಲೆ ಉಜ್ಜಿ ನಯಮಾಡಿ ಅನಂತರ ಹೊಳಪು ಮಾಡಿದ ಕಲ್ಲುಕೊಡಲಿಗಳು ನೋಡಲೂ ಬಹಳ ಸುಂದರವಾಗಿರುತ್ತವೆ. ಇದರಿಂದ ಮಾನವ ಜೀವನದಲ್ಲಿ ಒಂದು ಕ್ರಾಂತಿಯೇ ಉಂಟಾಯಿತು. ಇದುವರೆಗೂ ಆಹಾರ ಸಂಗ್ರಹಣೆಯಿಂದ ಜೀವಿಸುತ್ತಿದ್ದ ಮಾನವ, ಈಗ ಆಹಾರ ಉತ್ಪಾದನೆಗೆ ತೊಡಗಿದನು. ಇದರಿಂದ ಅವನು ಒಂದು ಕಡೆ ನೆಲೆ

ನಿಲ್ಲಲು ಸಾಧ್ಯವಾಯಿತು. ಇದರಿಂದ ಗ್ರಾಮೀಣ ಜೀವನ ಪ್ರಾರಂಭ ವಾಯಿತು. ಇದಕ್ಕನುಗುಣವಾಗಿ ಪಶುಪಾಲನೆ ಪ್ರಾರಂಭವಾಯಿತು. ಮಡಿಕೆ–ಕುಡಿಕೆಗಳ ಉಪಯೋಗವೂ, ಗೃಹನಿರ್ಮಾಣ ಕಾರ್ಯ, ಕಲೆ ಮುಂತಾದವೂ ಈ ಮಾನವನ ಸಂಸ್ಕೃತಿಯ ಲಕ್ಷಣಗಳಾದವು. ಅಂದರೆ ಸಂಸ್ಕೃತಿಯ ಕಡೆ ಮೊದಲ ಹೆಜ್ಜೆಯನ್ನು ಹಾಕಲು ಇವನು ಪ್ರಾರಂಭಿಸಿದನು. ಇದು ಸುಮಾರು ಕ್ರಿ.ಪೂ. ೩ನೇ ಶತಮಾನದಲ್ಲಿ ನಡೆಯಿತೆಂದು ಊಹಿಸ ಬಹುದು.

ವೀಲರ್‌ರವರು ಬ್ರಹ್ಮಗಿರಿಯಲ್ಲಿ ನಡೆಸಿದ ಉತ್ಖನನದಿಂದ ಈ ಸಂಸ್ಕೃತಿಯ ಅಧ್ಯಯನಕ್ಕೆ ವಿಶೇಷ ಪ್ರೋತ್ಸಾಹ ಸಿಕ್ಕಿದಂತಾಯಿತು. ಅನಂತರ ಬಳ್ಳಾರಿಯ ಸುತ್ತಮುತ್ತ, ವಿಶೇಷವಾಗಿ ಸಂಗನಕಲ್ಲುವಿನಲ್ಲಿ ಈ ಸಂಸ್ಕೃತಿಯ ಅವಶೇಷಗಳನ್ನು ಪತ್ತೆಹಚ್ಚಲಾಯಿತು. ಮಸ್ಕಿ, ಪಿಕ್ಲಿಹಾಳ್, ಟಿ. ನರಸಿಪುರ, ಶೋರಾಪುರ ಮುಖಜಭೂಮಿ, ತೆಕ್ಕಲಕೋಟೆ, ತುಂಗಭದ್ರಾತೀರ, ಕುಪ್ಪಗಲ್ಲು, ಹಳ್ಳೂರು, ಹೆಮ್ಮಿಗೆ ಮುಂತಾದ ಹತ್ತಾರು ನೆಲೆಗಳು ಬೆಳಕಿಗೆ ಬಂದು ಅವುಗಳಲ್ಲಿ ಉತ್ಖನನಗಳೂ ನಡೆದಿವೆ. ಈ ಉತ್ಖನನಗಳಿಂದ ನವಶಿಲಾ ಯುಗದ ಮಾನವನ ಜೀವನದ ಚಿತ್ರವನ್ನು ತಿಳಿಯಲು ಸಾಧ್ಯವಾಗಿದೆ. ಕರ್ನಾಟಕದಲ್ಲಿ ನವಶಿಲಾಯುಗದ ಮಾನವನು ಬೆಟ್ಟಗುಡ್ಡಗಳ ಶಿಖರ ಗಳಲ್ಲಿರುವ ಸಮತಟ್ಟಾದ ಪ್ರದೇಶಗಳಲ್ಲಿ ವಾಸಮಾಡುತ್ತಿದ್ದನು. ಅನಂತರ ಕಾಲಕ್ರಮದಲ್ಲಿ ಬೆಟ್ಟದ ಇಳಿಜಾರುಗಳಲ್ಲಿ ಗ್ರಾಮಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದನು. ಮರದ ಕಂಬಗಳನ್ನು ಭೂಮಿಯಲ್ಲಿ ನೆಟ್ಟು ಒಣಗಿದ ಗರಿ, ಹುಲ್ಲುಗಳಿಂದ ಚಾವಣಿಯನ್ನು ನಿರ್ಮಿಸಿ ವೃತ್ತಾಕಾರದ ಮನೆಗಳನ್ನು ನಿರ್ಮಿಸಿ ಕೊಂಡಿದ್ದನು. ಎಮ್ಮೆ, ಕುರಿ, ಹಂದಿ, ನಾಯಿ ಮುಂತಾದವುಗಳು ಇವನ ಸಾಕುಪ್ರಾಣಿಗಳು. ಬೇಟೆ, ಮೀನುಗಾರಿಕೆ ಇವನ ಮುಖ್ಯ ಕಸುಬು. ಮಡಿಕೆ–ಕುಡಿಕೆಗಳನ್ನು ಜೇಡಿಮಣ್ಣಿನಿಂದ ಮಾಡಿ, ಒಣಗಿಸಿ ನಂತರ ಸುಡು ತ್ತಿದ್ದರು. ಕುಂಬಾರನ ಮಡಿಕೆಯೂ ಇನ್ನೂ ತಿಳಿದಿರಲಿಲ್ಲ. ನೀರಿನ ಗಡಿಗೆ, ಜಾಡಿಗಳು, ರಂಧ್ರಗಳಿರುವ ಮಡಿಕೆ, ತಟ್ಟೆಗಳು, ಲೋಟಗಳು ಮುಂತಾದ ವನ್ನು ಇವನು ತಯಾರಿಸುತ್ತಿದ್ದನು. ನಯಗೊಳಿಸಿದ ಕೈಗೊಡಲಿ, ಅರೆ ಯುವ ಮತ್ತು ಕುಟ್ಟುವ ಕಲ್ಲು, ಸುತ್ತಿಗೆ, ಚಕ್ರಾಕಾರದ ಗದೆ ಇವನ ಆಯುಧಗಳು. ಇವುಗಳಲ್ಲಿ ಕೆಲವನ್ನು ಮರಕ್ಕೆ ಕಟ್ಟಿ ಉಪಯೋಗಿಸುತ್ತಿ

ದ್ದನು. ಸುಟ್ಟ ಮಣ್ಣಿನ ಬೊಂಬೆಗಳು ಅದರಲ್ಲಿಯೂ ವಿಶೇಷವಾಗಿ ಎತ್ತು ಗಳ ಗೊಂಬೆಗಳು ಈ ಕಾಲದಲ್ಲಿ ಬಳಕೆಯಲ್ಲಿದ್ದುವು. ಇವು ಕಲೆಯ ದ್ಯೋತಕ ಮಾತ್ರವಲ್ಲದೆ ಪೂಜಾವಸ್ತುಗಳೂ ಆಗಿದ್ದಿರಬಹುದು. ಬಂಡೆಯ ಗೋಡೆಯ ಮೇಲೆ ಮನುಷ್ಯ ಮತ್ತು ಪ್ರಾಣಿಗಳ ಚಿತ್ರವನ್ನು ಈ ಕಾಲದ ಮಾನವ ವಿಶೇಷವಾಗಿ ಬರೆದಿದ್ದಾನೆ. ಅದರಲ್ಲಿಯೂ ಹಸುವಿನ ಚಿತ್ರಗಳು ವಿಶೇಷ ವಾಗಿವೆ. ಅನೇಕ ಸ್ಥಳಗಳಲ್ಲಿ ಈ ಕಾಲದ ಬೂದಿಗುಡ್ಡೆಗಳೂ ವಿಶೇಷವಾಗಿ ದೊರಕಿವೆ. ಇದರಿಂದ ಪಶುಪಾಲನೆಗೆ ಇವರು ವಿಶೇಷ ಮಹತ್ವ ಕೊಟ್ಟಿದ್ದ ರೆಂದು ತಿಳಿಯುತ್ತದೆ. ಇವರು ತಮ್ಮ ಮನೆಯ ಒಳಗಡೆ ಹೆಣಗಳನ್ನು ಹೂಳುತ್ತಿದ್ದರು. ಗುಂಡಿಯನ್ನಗೆದು ಹೆಣವನ್ನು ಅಂಗಾತ ಮಲಗಿಸಿ, ಕಲ್ಲಿನ ಕೊಡಲಿ, ಮಡಿಕೆ-ಕುಡಿಕೆಗಳನ್ನು ಜೊತೆಯಲ್ಲಿಟ್ಟು ಹೆಣವನ್ನು ಹೂಳು ತ್ತಿದ್ದರು. ಚಿಕ್ಕಮಕ್ಕಳ ಹೆಣವನ್ನು ಜಾಡಿಗಳಲ್ಲಿಟ್ಟು ಹುಗಿಯುತ್ತಿದ್ದರು. ಇವರಲ್ಲಿ ಎರಡು ಬಗೆಯ ಜನಾಂಗದವರನ್ನು ಪತ್ತೆ ಹಚ್ಚಲಾಗಿದೆ. ಮೊದಲನೆಯದು ಅಲ್ಲಿಯೇ ಇದ್ದ ಮೂಲನಿವಾಸಿಗಳು ಮತ್ತು ಎರಡನೆ ಯದು ಹೊರಗಡೆಯಿಂದ ಬಂದ ದ್ರಾವಿಡರು. ಒಟ್ಟಿನಲ್ಲಿ ಹೇಳುವುದಾದರೆ ನವ ಶಿಲಾಯುಗದ ಈ ಜನ ಕರ್ನಾಟಕದಲ್ಲಿ ಸಂಸ್ಕೃತಿಯ ಲಕ್ಷಣಗಳನ್ನು ರೂಢಿಸಿಕೊಂಡು ಮುಂದಿನ ಸಂಸ್ಕೃತಿಗೆ ಭದ್ರಬುನಾದಿಯನ್ನು ಹಾಕಿದರು.

## ತಾಮ್ರಯುಗ

ಹೀಗೆ ನವ ಶಿಲಾಯುಗದ ಜನಗಳು ತಮ್ಮ ಜೀವನವನ್ನು ಸಾಗಿಸು ತ್ತಿದ್ದಾಗ, ಸುಮಾರು ಕ್ರಿ.ಪೂ. ೨ನೇ ಶತಮಾನದ ಪ್ರಾರಂಭದಲ್ಲಿನ ತಾಮ್ರ ಅಥವಾ ಕಂಚಿನ ಉಪಯೋಗವನ್ನು ತಿಳಿದಿದ್ದ ಹೆಚ್ಚು ಪ್ರಗತಿಶೀಲ ಸಂಸ್ಕೃತಿಯು ಭಾರತದ ಪಶ್ಚಿಮ ಅಥವಾ ಮಧ್ಯದಿಂದ ಕರ್ನಾಟಕಕ್ಕೆ ಬಂದು ಪ್ರಸರಿಸಿತು. ಈ ಸಂಸ್ಕೃತಿಯಲ್ಲಿ ನವ ಶಿಲಾಯುಗದ ಕಲ್ಲಿನ ಆಯುಧಗಳ ಜೊತೆಗೆ ತಾಮ್ರ ಮತ್ತು ಕಂಚಿನ ಆಯುಧಗಳೂ ಬಳಸಲ್ಪಡುತ್ತಿದ್ದವು. ಈ ಸಂಸ್ಕೃತಿಯು ಹೆಚ್ಚು ಸುಧಾರಿತವಾದದ್ದು. ಸುಧಾರಿತ ಗ್ರಾಮಜೀವನ, ಮಡಿಕೆ-ಕುಡಿಕೆಗಳನ್ನು ತಯಾರಿಸಲು ಕುಂಬಾರನ ಚಕ್ರದ ಉಪಯೋಗ, ವ್ಯವಸಾಯದಲ್ಲಿ ಪ್ರಗತಿ ಮುಂತಾದುವುಗಳನ್ನು ಹೊಂದಿದ್ದ ಈ ಸಂಸ್ಕೃತಿ ಭಾರತಾದ್ಯಂತ ಹರಡಿದ್ದಿತು. ಆದುದರಿಂದ ಅದು ಇಲ್ಲಿಯೂ ತನ್ನ ಪ್ರಭಾವ ವನ್ನು ಬೀರಿತು. ಪಿಕ್ಲಿಹಾಳ್‌ದಲ್ಲಿ ಮೊಟ್ಟಮೊದಲನೆಯ ಬಾರಿಗೆ ಕುಂಬಾರನ

ಚಕ್ರದಿಂದ ಮಾಡಿದ ಮಡಿಕೆಗಳು ಕಂಡುಬರುತ್ತವೆ. ಅವುಗಳ ಕೆಂಪು ಹೊರ ಮೈಮೇಲೆ ಕಪ್ಪು ಬಣ್ಣದ ಚಿತ್ರಗಳು ಇರುವುದನ್ನು ಕಾಣುತ್ತೇವೆ. ಇದೇ ರೀತಿಯ ಮಡಿಕೆಗಳು ಮಸ್ಕಿ, ತೆಕ್ಕಲಕೋಟೆ, ಸಂಗನಕಲ್ಲು, ಟಿ. ನರಸಿಪುರ ಮುಂತಾದ ಕಡೆಗಳಲ್ಲೂ ದೊರೆತಿವೆ. ಉತ್ತರ, ಪಶ್ಚಿಮ ಮತ್ತು ಮಧ್ಯ ಭಾರತಗಳಲ್ಲಿ ತಾಮ್ರದ ಆಯುಧಗಳು ಹೇರಳವಾಗಿ ದೊರಕಿದರೂ, ಕರ್ನಾಟಕದಲ್ಲಿ ಇವುಗಳ ಬಳಕೆ ಕಡಿಮೆ. ಆದುದರಿಂದ ಕೆಲವರು ಈ ಸಂಸ್ಕೃತಿಯನ್ನೂ ನವಶಿಲಾಯುಗ ಸಂಸ್ಕೃತಿಯ ಗುಂಪಿನಲ್ಲೇ ಸೇರಿಸುತ್ತಾರೆ. ಅದು ಹೇಗಾದರೂ ಇರಲಿ, ಈ ಜನಗಳು ಮೊಟ್ಟ ಮೊದಲ ಬಾರಿಗೆ ತಾಮ್ರ ಮತ್ತು ಕಂಚಿನ ಉಪಯೋಗವನ್ನು ಮಾಡಿದರೆಂಬುದು ಖಚಿತವಾದುದು.

## ಕಬ್ಬಿಣ ಯುಗ

ಮುಂದಿನ ಹಂತವೇ ಕಬ್ಬಿಣಯುಗ ಅಥವಾ ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಕಾಲ. ತಾಮ್ರ ಶಿಲಾಯುಗದ ಜನಗಳು ಜೀವನವನ್ನು ಸಾಗಿಸುತ್ತಿರುವಂತೆ, ಇದ್ದಕ್ಕಿದ್ದಂತೆ ಕಬ್ಬಿಣದ ಆಯುಧಗಳನ್ನು ಹೊಂದಿದ ಜನಗಳು ಬಂದು ತಮ್ಮ ಪ್ರಭಾವವನ್ನು ಬೀರಿದರು. ತಾಮ್ರ ಶಿಲಾಯುಗವು ನಾಶವಾಯಿತು. ಕಬ್ಬಿಣಯುಗವು ಪ್ರಾರಂಭವಾಯಿತು. ಈ ಜನಗಳು ಯಾರು ? ಎಲ್ಲಿಂದ ಬಂದವರು ? ಎಂಬ ಪ್ರಶ್ನೆಗಳಿಗೆ ಉತ್ತರ ಹೇಳುವುದು ಕಷ್ಟ. ಆದರೆ ಇಷ್ಟು ಮಾತ್ರ ಸತ್ಯ. ಅತ್ಯಂತ ಶಕ್ತಿಯುತವಾದ ಕಬ್ಬಣದ ಆಯುಧಗಳನ್ನು ಹೊಂದಿದ್ದ ಈ ಜನಗಳು ಮಾನವನ ಇತಿಹಾಸದಲ್ಲೇ ಒಂದು ಹೊಸ ಹೆಜ್ಜೆಯನ್ನು ಹಾಕಿ, ಪ್ರಗತಿಯ ಹಾದಿಯಲ್ಲಿ ಒಂದು ಮೈಲಿಗಲ್ಲನ್ನೇ ನಿರ್ಮಿಸಿದರು. ಈ ಜನಗಳು ದೊಡ್ಡ ದೊಡ್ಡ ಕಲ್ಲು ಚಪ್ಪಡಿ, ಬಂಡೆಗಳಿಂದ ಗೋರಿಗಳನ್ನು ನಿರ್ಮಿಸುತ್ತಿದ್ದರು. ಆದುದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಸಮಾಧಿ ಸಂಸ್ಕೃತಿ ಎಂದೂ ಕರೆಯುತ್ತೇವೆ.

ಕರ್ನಾಟಕದಲ್ಲಿ ಈ ಸಂಸ್ಕೃತಿಯ ಸಾವಿರಾರು ನೆಲೆಗಳು ಬೆಳಕಿಗೆ ಬಂದಿವೆ. ವೀಲರ್‌ರವರು ೧೯೪೭ರಲ್ಲಿ ನಡೆಸಿದ ಬ್ರಹ್ಮಗಿರಿಯ ಉತ್ಖನನದಿಂದ ಆರಂಭವಾಗಿ ಇಲ್ಲಿಯವರೆಗೆ ಹತ್ತಾರು ಉತ್ಖನನಗಳು ನಡೆದಿವೆ. ದೊಡ್ಡ ದೊಡ್ಡ ಕಲ್ಲಿನ ಬಂಡೆ ಮತ್ತು ಚಪ್ಪಡಿಗಳಿಂದ ಮಾಡಿದ ಇವರ ಗೋರಿಗಳಲ್ಲಿಯೂ ಸಾಕಷ್ಟು ವೈವಿಧ್ಯ ಇದೆ. ಶಿಲಾವರ್ತುಲಗಳಲ್ಲಿ ಗೋರಿಯ ಸುತ್ತಲೂ ಗುಂಡಗೆ ಬಂಡೆಗಳನ್ನು ನೆಟ್ಟಿರುತ್ತಾರೆ. ಮಧ್ಯದಲ್ಲಿ ಗೋರಿಯಿರುತ್ತದೆ.







ಸಾವನದುರ್ಗದ ಇಟ್ಟಿಗೆ ಬಯಲಲ್ಲಿ ಕಂಡುಬಂದ ಪಾಂಡವರ ಗುಡಿಗಳು (ಶವ ಕುಣಿಗಳು)

ಒರಟಾದ ಕಲ್ಲುಬಂಡೆಗಳಿಂದ ನಿರ್ಮಿತವಾದ ಶಿಲಾತೊಟ್ಟಿಗಳು, ಕಲ್ಲು ಚಪ್ಪಡಿಯ ಶವತೊಟ್ಟಿಗಳು, ಸಮಾಧಿಗುಂಡಿಗಳು, ನೆಡುಗಲ್ಲುಗಳು, ಸಾಲುಗಲ್ಲುಗಳು, ಶವಜಾಡಿಗಳು ಮುಂತಾದವು ವಿವಿಧ ರೀತಿಯ ಸಮಾಧಿಗಳು. ಅದು ಯಾವ ರೀತಿಯ ಸಮಾಧಿಯೇ ಆಗಿರಲಿ, ಅದರಲ್ಲಿ ಕಾಣಬರುವ ಮುಖ್ಯ ಅಂಶವೆಂದರೆ ಮನುಷ್ಯನ ಮೂಳೆಗಳನ್ನು ತೊಟ್ಟಿಯಲ್ಲಿಟ್ಟು, ಅವುಗಳ ಜೊತೆಗೆ ಕಬ್ಬಿಣದ ಆಯುಧಗಳು, ಮಡಿಕೆ-ಕುಡಿಕೆಗಳು, ಮಣಿಗಳು ಮುಂತಾದವುಗಳನ್ನು ಹೂತಿಟ್ಟು ಸಮಾಧಿಯನ್ನು ರಚಿಸುತ್ತಿದ್ದರು. ಇವರ ಸಾವಿರಾರು ಸಮಾಧಿಗಳು ದೊರಕಿದ್ದರೂ ಇವರು ವಾಸಿಸುವ ಸ್ಥಳಗಳು ಹೇರಳವಾಗಿ ದೊರೆತಿಲ್ಲ. ಆದರೂ ದೊರೆತಿರುವ ನೆಲೆಗಳಿಂದ ಈ ಜನರ ಜೀವನ ಕ್ರಮವನ್ನು ರೂಪಿಸಬಹುದಾಗಿದೆ.

ಇವರು ಜನಭರಿತವಾದ ಗ್ರಾಮಗಳಲ್ಲಿ ವಾಸಿಸುತ್ತಿದ್ದರು. ಹುಲ್ಲಿನ ಅಥವಾ ಸೊಪ್ಪಿನ ಚಾವಣಿ ; ತಡಿಕೆಯ ಗೋಡೆಯ ಮನೆಗಳನ್ನು ಕಟ್ಟುತ್ತಿದ್ದರು. ವ್ಯವಸಾಯವೇ ಅವರ ಮುಖ್ಯ ಕಸುಬಾಗಿದ್ದಿತು. ನೀರಾವರಿ ಪದ್ಧತಿಯನ್ನು ಪ್ರಾರಂಭಿಸಿದವರು ಇವರೇ. ಭತ್ತ, ಕಬ್ಬು, ತೆಂಗು, ರಾಗಿ ಮತ್ತು ದ್ವಿದಳ ಧಾನ್ಯಗಳನ್ನು ಇವರು ಬೆಳೆಯುತ್ತಿದ್ದರು. ಬೇಟೆ ಮತ್ತು ಮೀನುಗಾರಿಕೆ ಇವರ ಕಸುಬು. ದನ, ಕುರಿ, ಕೋಳಿ, ಮೇಕೆ, ನಾಯಿ, ಕುದುರೆಗಳನ್ನು ಸಾಕುತ್ತಿದ್ದರು. ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆಗಳನ್ನು ಇವರು ತಯಾರು ಮಾಡುತ್ತಿದ್ದರು. ಮೂರು ಕಾಲಿನ ದೊಡ್ಡ ದೊಡ್ಡ ಜಾಡಿಗಳಲ್ಲಿ ಧಾನ್ಯವನ್ನು ಶೇಖರಿಸುತ್ತಿದ್ದರು. ಲೋಹಗಾರಿಕೆಯಲ್ಲೂ ಇವರು ಸಾಕಷ್ಟು ಪ್ರಗತಿ ಸಾಧಿಸಿದ್ದರು. ಕಬ್ಬಿಣದ ಕೊಡಲಿ, ಚಾಕು, ಬಾಕು, ಕತ್ತಿ ಮುಂತಾದ ಆಯುಧಗಳು, ಇತರ ಉಪಕರಣಗಳು, ಚಿನ್ನದ ಆಭರಣಗಳನ್ನು ಇವರು ತಯಾರಿಸುತ್ತಿದ್ದರು. ಕೊಂಬು, ದಂತ, ಚಿನ್ನ, ಬೆಲೆಬಾಳುವ ಕಲ್ಲುಗಳಿಂದ ಮಣಿಗಳನ್ನು ತಯಾರಿಸಿ ಸರಗಳನ್ನು ಮಾಡುತ್ತಿದ್ದರು. ಇವರ ಶವಸಂಸ್ಕಾರ ಪದ್ಧತಿಯನ್ನು ಗಮನಿಸಿದರೆ ಇವರಿಗೆ ಮರಣಾನಂತರ ಇನ್ನೊಂದು ಜೀವನವಿದ್ದಿತೆಂಬ ನಂಬಿಕ ಚೆನ್ನಾಗಿ ಬೇರೂರಿದ್ದಿತೆಂದು ಗೊತ್ತಾಗುತ್ತದೆ. ಸಮಾಧಿಗಳನ್ನು ಇಷ್ಟು ಚೆನ್ನಾಗಿ ಕಟ್ಟುವ ಮತ್ತಾವ ಜನಗಳನ್ನೂ ಕಾಣುವುದು ಕಷ್ಟ. ಇವರು ಬಹುಶಃ ದ್ರಾವಿಡ ಭಾಷೆಯನ್ನಾಡುತ್ತಿದ್ದ ಜನಗಳಿರಬೇಕೆಂದು ಊಹೆ. ಸುಮಾರು ಕ್ರಿ. ಶ. ೨ನೇ ಶತಮಾನದಲ್ಲಿ

ಕರ್ನಾಟಕದಲ್ಲಿ ಇವರು ಉನ್ನತ ಸ್ಥಿತಿಯಲ್ಲಿದ್ದರು. ಇವರ ಮಡಿಕೆಗಳ ಮೇಲೆ ಕಾಣಬರುವ ಗೀರು ಚಿತ್ರಗಳೇ ಅಕ್ಷರಕ್ಕೆ ನಾಂದಿಯಾಯಿತೆಂದು ಹಲವರು ಭಾವಿಸಿದ್ದಾರೆ. ಅದು ಹೇಗಾದರೂ ಇರಲಿ, ಇವರು ಇತಿಹಾಸದ ಪ್ರಾರಂಭ ಕಾಲದಲ್ಲಿಯೂ ಇದ್ದು, ಇತಿಹಾಸಪೂರ್ವ ಕಾಲ ಮತ್ತು ಇತಿಹಾಸಕಾಲ ಎರಡಕ್ಕೂ ಒಂದು ವಿಧವಾದ ಸೇತುವೆಯನ್ನು ನಿರ್ಮಿಸಿದರು. ಅಂದರೆ ಇವರೇ ಕರ್ನಾಟಕದಲ್ಲಿ ಇತಿಹಾಸ ಕಾಲದ ಪ್ರವರ್ತಕರಾದರು. ಹೀಗೆ ಕರ್ನಾಟಕದಲ್ಲಿ ಹಳೆಯ ಶಿಲಾಯುಗದಿಂದ ಪ್ರಾರಂಭವಾಗಿ ಕಬ್ಬಿಣದ ಯುಗದ ವರೆಗಿನ ಜೀವನವನ್ನು ಇತಿಹಾಸಪೂರ್ವ ಪುರಾತತ್ವ ಒದಗಿಸಿದೆ.

ಈಗ ಕರ್ನಾಟಕದಲ್ಲಿ ನಡೆದಿರುವ ಕೆಲವು ಪ್ರಮುಖ ಉತ್ಖನನಗಳನ್ನು ಗಮನಿಸಬಹುದು.

### ಬ್ರಹ್ಮಗಿರಿ

ಸರ್ ಮಾರ್ಟಿಮರ್ ವೀಲರ್ ಬ್ರಹ್ಮಗಿರಿಯಲ್ಲಿ ೧೯೪೭ರಲ್ಲಿ ನಡೆಸಿದ ಪುರಾತತ್ವ ಉತ್ಖನನ ಅತಿ ಮುಖ್ಯವಾದುದು. ದಕ್ಷಿಣ ಭಾರತದ ಪೂರ್ವೇತಿಹಾಸದ ಇತಿಮಿತಿಗಳನ್ನು, ಮತ್ತು ಕಾಲವನ್ನು ತಿಳಿಯುವುದೇ ಈ ಉತ್ಖನನದ ಮುಖ್ಯ ಉದ್ದೇಶವಾಗಿದ್ದಿತು. ಈ ಉತ್ಖನನದಿಂದ ಮೊಟ್ಟ ಮೊದಲ ಬಾರಿಗೆ ಕರ್ನಾಟಕದ ಪುರಾತತ್ವದಲ್ಲಿ ಒಂದು ಕ್ರಾಂತಿಯೇ ಉಂಟಾಯಿತು. ಇಲ್ಲಿರುವ ಮೂರು ಸಾಂಸ್ಕೃತಿಕ ಸ್ತರಗಳಲ್ಲಿ ಮೇಲಿನದು ಇತಿಹಾಸಕಾಲದ ಆಂಧ್ರ ಸಂಸ್ಕೃತಿ ; ಅದರ ಕೆಳಗಿನದು ಬೃಹತ್ ಶಿಲಾಸಮಾಧಿ ಸಂಸ್ಕೃತಿ ಮತ್ತು ಅದರ ಕೆಳಗಿನದು ನವ ಶಿಲಾಯುಗ ಸಂಸ್ಕೃತಿ. ಈ ಒಂದೊಂದು ಸಂಸ್ಕೃತಿಯ ಪರಸ್ಪರ ಸಂಬಂಧವೂ ಈ ಉತ್ಖನನದಿಂದಲೇ ತಿಳಿದಿದ್ದು. ಹೀಗಾಗಿ ಈ ಉತ್ಖನನ ಕರ್ನಾಟಕ ಪುರಾತತ್ವ ವಿದ್ಯಾರ್ಥಿಗಳಿಗೆ ಓನಾಮದಂತಿದೆ.

### ಪಿಕ್ಲಿಹಾಳ್

ರಾಯಚೂರು ಜಿಲ್ಲೆಯ ಪಿಕ್ಲಿಹಾಳ್‌ನಲ್ಲಿ ೧೯೫೭ರಲ್ಲಿ ಕೇಂಬ್ರಿಜ್ ವಿಶ್ವ ವಿದ್ಯಾನಿಲಯದ ಆಲ್‌ಚಿನ್‌ರವರು ಉತ್ಖನನ ನಡೆಸಿದರು. ಇಲ್ಲಿಯೂ ನವ ಶಿಲಾಯುಗ, ತಾಮ್ರ ಶಿಲಾಯುಗ, ಕಬ್ಬಿಣಯುಗ ಮತ್ತು ಚಾರಿತ್ರಿಕ ಯುಗಗಳಿಗೆ ಸೇರಿದ ಅವಶೇಷಗಳು ದೊರೆತವು. ಮಸ್ಕಿಯಲ್ಲಿ ೧೯೫೪ರಲ್ಲಿ ಬಿ. ಕೆ. ಥಾಪರ್‌ರವರು ಉತ್ಖನನ ನಡೆಸಿದರು. ಬ್ರಹ್ಮಗಿರಿಯಲ್ಲಿ ದೊರೆ

ಬ್ರಹ್ಮಗಿರಿ– ಇಟ್ಟಿಗೆಯ ಚೈತ್ಯಾಕಾರದ ಕಟ್ಟಡ




ಬ್ರಹ್ಮಗಿರಿಯಲ್ಲಿರುವ ಅಶೋಕನ ಕಲ್ಲುಬಂಡೆ ಶಾಸನ

ತಂತೆಯೇ ಇಲ್ಲಿಯೂ ಸಾಂಸ್ಕೃತಿಕ ಸ್ತರಗಳು ದೊರಕಿದವು. ತಾಮ್ರ ಶಿಲಾಯುಗ ಸಂಸ್ಕೃತಿಯ ಮೇಲೆ ಇಲ್ಲಿ ವಿಶೇಷ ಮಾಹಿತಿ ದೊರಕಿದೆ. ಮಧ್ಯ-ಪಶ್ಚಿಮ ಭಾರತಗಳ ತಾಮ್ರ ಶಿಲಾಯುಗ ಸಂಸ್ಕೃತಿಗಳ ಪ್ರಭಾವ ಕರ್ನಾಟಕದಲ್ಲಿ ವಿಶೇಷವಾಗಿದೆ ಎಂದು ತಿಳಿದದ್ದು ಈ ಉತ್ಖನನದಿಂದ. ಬಳ್ಳಾರಿಯ ಸಂಗನಕಲ್ಲು ನವ ಶಿಲಾಯುಗದ ಸಂಸ್ಕೃತಿಗೆ ತೌರೂರೆನಿಸಿದೆ. ಇಲ್ಲಿ ಬಿ. ಸುಬ್ಬರಾಯರು ನಡೆಸಿದ ಉತ್ಖನನಗಳಿಂದ ಈ ಸಂಸ್ಕೃತಿಯ ಸ್ಪಷ್ಟರೂಪ ಮೊದಲು ಕಾಣಿಸಿಕೊಂಡಿತು. ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರದಲ್ಲಿ ಶೇಷಾದ್ರಿಯವರು ಉತ್ಖನನ ನಡೆಸಿದರು. ಇಲ್ಲಿಯೂ ನವ ಶಿಲಾಯುಗ, ಕಬ್ಬಿಣಯುಗ ಮತ್ತು ಇತಿಹಾಸ ಆರಂಭ ಕಾಲದ ಸಂಸ್ಕೃತಿಗಳು ಬೆಳಕಿಗೆ ಬಂದಿವೆ. ತೆಕ್ಕಲಕೋಟೆ ಮತ್ತು ಹಳ್ಳೂರುಗಳಲ್ಲಿ ನಡೆದ ಉತ್ಖನನಗಳೂ ಮುಖ್ಯವಾದವು. ಹಳ್ಳೂರಿನಲ್ಲಿ ದೊರಕಿರುವ ಕಬ್ಬಿಣವು ಕ್ರಿ. ಪೂ. ಹನ್ನೊಂದನೆಯ ಶತಮಾನಕ್ಕೆ ಸೇರಿದುದರಿಂದ, ಸದ್ಯಕ್ಕೆ ಈ ಸಂಸ್ಕೃತಿಯ ಅತಿ ಪ್ರಾಚೀನ ಮಾಹಿತಿಯನ್ನು ಅದು ಒದಗಿಸಿದೆ. ಕಬ್ಬಿಣಯುಗದ ಕಾಲ ನಿರ್ಣಯಕ್ಕೆ ಅದು ಬಲು ಮುಖ್ಯವಾಗಿದೆ. ಜಡಿಗೇನಹಳ್ಳಿಯಲ್ಲಿ ಶೇಷಾದ್ರಿಯವರು ನಡೆಸಿದ ಉತ್ಖನನಗಳಿಂದ ಶಿಲಾತೊಟ್ಟಿಗಳು ಇಲ್ಲಿಯೂ ಬಳಕೆಯಲ್ಲಿದ್ದುದು ಗೊತ್ತಾಗುತ್ತದೆ. ಹೆಮ್ಮಿಗೆಯಲ್ಲಿ ನಡೆದ ಉತ್ಖನನವೂ ಶಿಲಾಯುಗದ ವಿಷಯವನ್ನು ಸ್ಪಷ್ಟಪಡಿಸುತ್ತದೆ.

**ಚಂದ್ರವಳ್ಳಿ**

ಚಂದ್ರವಳ್ಳಿಯಲ್ಲಿ ಹಿಂದೆ ಮತ್ತು ಇತ್ತೀಚೆಗೆ ನಡೆದ ಉತ್ಖನನಗಳಿಂದ ಇತಿಹಾಸದ ಮೇಲೆ ವಿಶೇಷ ಬೆಳಕು ಬಿದ್ದಿದೆ. ಅನೇಕ ಸಾತವಾಹನರ,



ಟೈಬೀರಿಯಸ್ ಚಕ್ರವರ್ತಿಯ ನಾಣ್ಯ

ಚುಟುಗಳ, ಮಹಾರಥಿಗಳ, ರೋಮನ್ ಚಕ್ರವರ್ತಿಗಳ ನಾಣ್ಯಗಳು ಬೆಳಕಿಗೆ ಬಂದಿವೆ. ಬನವಾಸಿಯಲ್ಲಿನ ಉತ್ಖನನಗಳಿಂದ ಸಾತವಾಹನ ಕಾಲದ ಇಟ್ಟಿಗೆ ಕಟ್ಟಡಗಳು ಬೆಳಕಿಗೆ ಬಂದಿವೆ. ಇದರಿಂದ ಬನವಾಸಿಯ ಇತಿಹಾಸವೂ ಸ್ಪಷ್ಟ ವಾಗುತ್ತದೆ. ವಡಗಾಂವ್ ಮಾಧವಪುರದಲ್ಲಿಯೂ ಸಾತವಾಹನ ಕಾಲದ ನಗರವು ಬೆಳಕಿಗೆ ಬಂದಿದೆ. ಹೀಗೆ ಪ್ರತಿಯೊಂದು ಉತ್ಖನನವೂ ಒಂದಲ್ಲ ಒಂದು ರೀತಿಯಿಂದ ಇತಿಹಾಸಕ್ಕೆ ಉಪಕಾರಿಯಾಗಿದೆ.

ಈ ಮೇಲಿನ ಉದಾಹರಣೆಗಳಿಂದ ಇತಿಹಾಸಪೂರ್ವ ಪುರಾತತ್ವಕ್ಕೆ ಉತ್ಖನನಗಳು ಎಷ್ಟರ ಮಟ್ಟಿಗೆ ಸಹಾಯ ನೀಡಿವೆ ಎಂಬುದು ತಿಳಿಯುತ್ತದೆ. ಜೊತೆಗೆ ಇತಿಹಾಸಪೂರ್ವ ಪುರಾತತ್ವವು ಬ್ರೂಸ್‌ಫುಟ್‌ನ ಕಾಲದಿಂದ ಇಲ್ಲಿಯವರೆಗೆ ಹೇಗೆ ಪ್ರಗತಿಯನ್ನು ಸಾಧಿಸಿತು ಎಂಬುದನ್ನೂ ತಿಳಿಸುತ್ತದೆ.

## ಶಾಸನ ಮತ್ತು ಲಿಪಿಶಾಸ್ತ್ರ

ನಾವು ಆಗಲೇ ಗಮನಿಸಿರುವಂತೆ ಶಾಸನಶಾಸ್ತ್ರ ಅಧ್ಯಯನದಲ್ಲಿ ಕರ್ನಾಟಕ ವಿಶೇಷ ಪ್ರಗತಿಯನ್ನು ಸಾಧಿಸಿದೆ. ಭಾರತದ ಇತರ ಯಾವ ಪ್ರಾಂತವೂ ಸಾಧಿಸದಷ್ಟು ಪ್ರಗತಿಯನ್ನು ಈ ವಿಷಯದಲ್ಲಿ ಕರ್ನಾಟಕವು ಈ ಎಂಭತ್ತು ವರ್ಷಗಳಲ್ಲಿ ಸಾಧಿಸಿದೆ ಎನ್ನುವುದು ಎಲ್ಲ ಕನ್ನಡಿಗರಿಗೂ ಹೆಮ್ಮೆಯ ಸಂಗತಿ. 'ಎಪಿಗ್ರಾಫಿಯ ಕರ್ನಾಟಿಕ' ಎಂಬ ಶಾಸನ ಸಂಪುಟಗಳು ಶಾಸನಶಾಸ್ತ್ರ ಪ್ರಪಂಚದಲ್ಲಿ ಬಲು ಗೌರವಯುತ ಪ್ರಕಟನೆಗಳು. ಇನ್ನೂ ಅನೇಕ ಪ್ರಾಂತಗಳು ಈ ರೀತಿಯ ಶಾಸನ ಸಂಪುಟಗಳನ್ನು ಪ್ರಾರಂಭಿಸಿಯೇ ಇಲ್ಲ ಎಂದರೆ ಕರ್ನಾಟಕದ ಸಾಧನೆಯ ಮಹತ್ತ್ವ ಅರ್ಥವಾಗುತ್ತದೆ.

### ಲೂಯಿ ರೈಸ್

ಕರ್ನಾಟಕದಲ್ಲಿ ಶಾಸನಶಾಸ್ತ್ರ ಅಧ್ಯಯನಕ್ಕೆ ಭದ್ರವಾದ ತಳಹದಿಯನ್ನು ಹಾಕಿದವರು ಬಿ. ಎಲ್. ರೈಸ್. ೧೮೮೬ ರಲ್ಲಿ ಇವರು 'ಎಪಿಗ್ರಾಫಿಯ ಕರ್ನಾಟಿಕ'ದ ಮೊದಲನೆಯ ಸಂಪುಟವನ್ನು ಪ್ರಕಟಿಸಿದರು. ಇದಾದ ಎರಡು ವರುಷಗಳ ನಂತರ ಭಾರತ ಸರಕಾರವು 'ಎಪಿಗ್ರಾಫಿಯಾ ಇಂಡಿಕ' ಎಂಬ ಶಾಸನ ಸಂಪುಟವನ್ನು ಪ್ರಾರಂಭಿಸಿತು ಎನ್ನುವುದನ್ನು ಮರೆಯುವ ಹಾಗಿಲ್ಲ. ಎಪಿಗ್ರಾಫಿಯ ಎನ್ನುವ ಪದವೂ ರೈಸರಿಂದಲೇ ಸೃಷ್ಟಿಸಲ್ಪಟ್ಟು, ಈಗ ಅದು ಇತರ ಎಲ್ಲರಿಂದಲೂ ಅನುಕರಿಸಲ್ಪಟ್ಟಿದೆ. ರೈಸರು ಪಂಡಿತರ ಸಹಾಯದಿಂದ




ಬಿ. ಎಲ್. ರೈಸ್

ಹಳ್ಳಿಗಳನ್ನು ತಿರುಗಿ ಮೈಸೂರು ಸಂಸ್ಥಾನದ ಶಾಸನಗಳನ್ನು ಜಿಲ್ಲಾವಾರು ವಿಂಗಡಿಸಿ ಪ್ರಕಟಿಸಿದರು. ೧೮೮೬ರಿಂದ ೧೯೦೪ರ ವರೆಗೆ ರೈಸರು ಸುಮಾರು ಒಂಬತ್ತು ಸಾವಿರ ಶಾಸನಗಳನ್ನು ಓದಿ ಅವುಗಳನ್ನು 'ಎಪಿಗ್ರಾಫಿಯ ಕರ್ನಾಟಿಕ'ದ ಹನ್ನೆರಡು ಸಂಪುಟಗಳಲ್ಲಿ ಪ್ರಕಟಿಸಿದರು. ಯಾವ ದೃಷ್ಟಿಯಿಂದ ನೋಡಿದರೂ ರೈಸರ ಸಾಧನೆಯು ಕರ್ನಾಟಕಕ್ಕೆ ಅವರು ನೀಡಿದ ಮಹಾ ಕಾಣಿಕೆ ಎಂದು ಒಪ್ಪಲೇಬೇಕು. ಈ ಭದ್ರಬುನಾದಿಯ ಮೇಲೆ ಕರ್ನಾಟಕದಲ್ಲಿ ಶಾಸನ ಸಂಗ್ರಹ ಮತ್ತು ಪ್ರಕಟನಾ ಕಾರ್ಯ ನಡೆಯುತ್ತಿದೆ.

**ಆರ್. ನರಸಿಂಹಾಚಾರ್**

ರೈಸರು ಮೈಸೂರಿನ ಪುರಾತತ್ತ್ವ ಇಲಾಖೆಯ ನಿರ್ದೇಶಕರಾಗಿ ನಿವೃತ್ತ ರಾದನಂತರ ಅವರ ಜಾಗಕ್ಕೆ ಅಷ್ಟೇ ಸಮರ್ಥರಾದ ಆರ್. ನರಸಿಂಹಾ ಚಾರ್ಯರು ಬಂದದ್ದು ಕರ್ನಾಟಕ ಪುರಾತತ್ತ್ವದ ಅದೃಷ್ಟವೆಂದೇ ಹೇಳಬೇಕು. ಇವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಖ್ಯಾತ ವಿದ್ವಾಂಸರಾಗಿದ್ದರು. ಒಂದು ಊರಿನಿಂದ ಮತ್ತೊಂದು ಊರಿನ ಪ್ರಯಾಣ ಮಾಡುವುದು ಕಷ್ಟ ಸಾಧ್ಯವಾಗಿದ್ದ ಆ ಕಾಲದಲ್ಲಿ ಇವರು ಮೈಸೂರು ಸಂಸ್ಥಾನದ ಹಳ್ಳಿಗಳನ್ನು ತಿರುಗಿ ಸಾವಿರಾರು ಹೊಸ ಶಾಸನಗಳನ್ನು ಬೆಳಕಿಗೆ ತಂದರು. ಇವುಗಳನ್ನು ಎಪಿಗ್ರಾಫಿಯ ಕರ್ನಾಟಿಕದ ಸಪ್ಲಿಮೆಂಟ್‌ಗಳೆಂದು ನಿಯೋಜಿಸಿದರು. ರೈಸರು ತಯಾರಿಸಿದ್ದ 'ಎಪಿಗ್ರಾಫಿಯ ಕರ್ನಾಟಿಕದ'ದ ಎರಡನೆ ಸಂಪುಟವಾದ ಶ್ರವಣ ಬೆಳಗೊಳ ಶಾಸನಸಂಪುಟವನ್ನು ಪರಿಷ್ಕರಿಸಿ, ತಪ್ಪುಗಳನ್ನು ತಿದ್ದಿ ಪ್ರಕಟಿಸಿ ದರು. ರೈಸರ ಕಣ್ಣಿಗೆ ಬೀಳದೆ ಉಳಿದುಕೊಂಡಿದ್ದ ಹೊಸ ಶಾಸನಗಳನ್ನು ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿದರು. ಇವರ ಕಾರ್ಯವನ್ನು ಮೆಚ್ಚಿದ ಅಂದಿನ ಮೈಸೂರು ಮಹಾರಾಜರು ಇವರಿಗೆ ರಾವ್‌ಬಹದ್ದೂರ್ ಎಂಬ ಬಿರುದನ್ನು ದಯಪಾಲಿಸಿದರು. 'ಪ್ರಾಕ್ತನ ವಿಮರ್ಶ ವಿಚಕ್ಷಣ' ಎಂಬ ಬಿರುದು ಇವರು ಕರ್ನಾಟಕ ಪುರಾತತ್ತ್ವಕ್ಕೆ ನೀಡಿದ ಕಾಣಿಕೆಯ ಫಲ.

ನರಸಿಂಹಾಚಾರ್ಯರ ನಿವೃತ್ತಿಯ ನಂತರ ವಿಶೇಷವಾಗಿ ಕೆಲಸ ಮಾಡಿದವರು ಎಂ. ಎಚ್. ಕೃಷ್ಣ ಅವರು. ನರಸಿಂಹಾಚಾರ್ಯರ ಕೆಲಸ ವನ್ನೇ ಮುಂದುವರಿಸಿಕೊಂಡು ಬಂದು ಮೈಸೂರು ಪುರಾತತ್ತ್ವ ವಾರ್ಷಿಕ ವರದಿಗಳು ವಿದ್ವತ್ಪೂರ್ಣವೂ ಉಪಯುಕ್ತವೂ ಆಗುವಂತೆ ಮಾಡಿದರು. ಈ ವರದಿಗಳಲ್ಲಿ ನೂರಾರು ಹೊಸ ಶಾಸನಗಳನ್ನು ಪ್ರಕಟಿಸಿದರು.

'ಎಪಿಗ್ರಾಫಿಯ ಕರ್ನಾಟಿಕ'ದ ಹನ್ನೆರಡು ಸಂಪುಟಗಳ ಪ್ರತಿಗಳು ಮುಗಿದು ಹೋಗಿ ಶಾಸನಶಾಸ್ತ್ರ ವಿದ್ಯಾರ್ಥಿಗಳಿಗೂ ಮತ್ತು ವಿದ್ವಾಂಸರಿಗೂ ಅವು ಲಭ್ಯವಾಗುತ್ತಿರಲಿಲ್ಲ. ಈ ಪರಿಸ್ಥಿತಿಯನ್ನು ಮನಗಂಡ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಹಾ. ಮಾ. ನಾಯಕರು ಒಂದು ಯೋಜನೆಯನ್ನು ಸಿದ್ಧಪಡಿಸಿ, ಈ ಹನ್ನೆರಡು ಸಂಪುಟಗಳ ಪರಿಷ್ಕರಣ ಮತ್ತು ಪುನರ್ಮುದ್ರಣ ಕಾರ್ಯವನ್ನು ನಡೆಸುತ್ತಿದ್ದಾರೆ. ಈಗಾಗಲೇ ಕೊಡಗು, ಶ್ರವಣಬೆಳಗೊಳ, ಮೈಸೂರು



ಆರ್. ನರಸಿಂಹಾಚಾರ್ಯರು

ಮತ್ತು ಮಂಡ್ಯ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಆರು ಸಂಪುಟಗಳು ಸುಂದರ ರೂಪದಲ್ಲಿ ಹೊರಬಂದು ಶಾಸನಶಾಸ್ತ್ರ ಸಂಶೋಧಕರಿಗೆ ಮಹೋಪಕಾರ ವಾಗಿದೆ. ಮೈಸೂರಿನಲ್ಲಿ ಶಾಸನಶಾಸ್ತ್ರ ಸಂಶೋಧನೆಯ ಪರಂಪರೆ ಹೇಗೆ ಮುಂದುವರಿಯುತ್ತಿದೆ ಎನ್ನುವುದಕ್ಕೆ ಇದು ಉತ್ತಮ ಉದಾಹರಣೆ.

ಕರ್ನಾಟಕದ ಉತ್ತರ ಜಿಲ್ಲೆಗಳಲ್ಲಿ ಸುವ್ಯವಸ್ಥಿತವಾದ ಶಾಸನಸಂಗ್ರಹ ಮತ್ತು ಅಧ್ಯಯನ ನಡೆಯಲಿಲ್ಲ. ಈ ಜಿಲ್ಲೆಗಳು ಅಂದಿನ ವಿವಿಧ ಪ್ರಾಂತ ಗಳಿಗೆ ಸೇರಿದ್ದುದರಿಂದ ವ್ಯವಸ್ಥಿತ ಶಾಸನಸಂಗ್ರಹ ಸಾಧ್ಯವಾಗಲಿಲ್ಲ.

ಧಾರವಾಡ, ಬಿಜಾಪುರ, ಬೀದರ್, ಉತ್ತರಕನ್ನಡ, ದಕ್ಷಿಣಕನ್ನಡ, ಬಳ್ಳಾರಿ, ಗುಲ್ಬರ್ಗ, ರಾಯಚೂರು ಜಿಲ್ಲೆಗಳಲ್ಲಿ ಭಾರತ ಸರಕಾರದ ಶಾಸನ ಇಲಾಖೆಯು ಶಾಸನಗಳನ್ನು ಪತ್ರೆಮಾಡಿ, ಅವುಗಳನ್ನು ಪ್ರಕಟಿಸುತ್ತಿದೆ. ಈ ಇಲಾಖೆಯು ಪ್ರತಿವರ್ಷವೂ ಕಂಡುಹಿಡಿದ ಶಾಸನಗಳ ಸಾರಾಂಶವನ್ನು ವಾರ್ಷಿಕ ವರದಿಗಳಲ್ಲಿ ಪ್ರಕಟಿಸುತ್ತದೆ. 'ದಕ್ಷಿಣ ಭಾರತದ ಶಾಸನಗಳು' ಎಂಬ ಮಾಲಿಕೆಯಲ್ಲಿ ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಇದೇ ಇಲಾಖೆಯು ಶಾಸನಗಳನ್ನು ಪ್ರಕಟಿಸುತ್ತಿದೆ. ಇದೇ ಇಲಾಖೆಯು ಪ್ರಕಟಿಸುವ 'ಎಪಿಗ್ರಾಫಿಯ ಇಂಡಿಕ'ದಲ್ಲಿ ಶಾಸನಗಳು ವಿಶದವಾದ ಟಿಪ್ಪಣಿಗಳೊಂದಿಗೆ ಪ್ರಕಟವಾಗುತ್ತವೆ. ಇವುಗಳಲ್ಲಿ ಕರ್ನಾಟಕದ ಶಾಸನಗಳೂ ಸೇರಿರುತ್ತವೆ. ಪರ್ಷಿಯನ್ ಮತ್ತು ಅರೇಬಿಕ್ ಭಾಷೆಯ ಶಾಸನಗಳೂ ಇದೇ ಸಂಪುಟದಲ್ಲಿ ಪ್ರತ್ಯೇಕವಾಗಿ ಪ್ರಕಟವಾಗುತ್ತವೆ. ಮೈಸೂರು ಸಂಸ್ಥಾನಕ್ಕೆ ಲೂಯಿ ರೈಸ ರಿದ್ದಂತೆ, ಉತ್ತರ ಕರ್ನಾಟಕಕ್ಕೆ ಫ್ಲೀಟರಿದ್ದರು. ಇವರೂ ನೂರಾರು ಶಾಸನಗಳನ್ನು ಸಂಗ್ರಹ ಮಾಡಿ, ಅವುಗಳನ್ನು ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿದರು. ಈ ಶಾಸನಗಳನ್ನು ಪೂರ್ಣವಾಗಿ ಬಳಸಿಕೊಂಡು ಕರ್ನಾಟಕ ಇತಿಹಾಸವನ್ನು ಬೊಂಬಾಯಿಯ ಗೆಜೆಟಿಯರ್‌ನಲ್ಲಿ ಪ್ರಕಟಿಸಿದ ಕೀರ್ತಿಯೂ ಇವರಿಗೆ ಸೇರಬೇಕು. ಇದೇ ರೀತಿ ಶಾಸನಸಂಗ್ರಹ ಮತ್ತು ಪ್ರಕಟಣೆಯ ಕಾರ್ಯದಲ್ಲಿ ವಿಶೇಷ ಕೆಲಸ ಮಾಡಿದವರೆಂದರೆ ಎಚ್. ಕೃಷ್ಣಶಾಸ್ತ್ರಿ, ಕೃಷ್ಣಮಾಚಾರ್ಲು, ನೆಲಮಂಗಲ ಲಕ್ಷ್ಮೀನಾರಾಯಣರಾವ್, ಪಿ. ಬಿ. ದೇಸಾಯಿ, ಪಂಚಮುಖಿ ಜಿ. ಎಸ್. ಗಾಯಿ ಮತ್ತು ಅಣ್ಣಿಗೇರಿ.

ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಪೀಠವೂ ಕೆಲವು ಶಾಸನ ಸಂಪುಟಗಳನ್ನು ಹೊರತಂದಿದೆ. ಇದೇ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗವು ಶಾಸನ ಅಧ್ಯಯನವನ್ನು ಕೈಗೆತ್ತಿಕೊಂಡು ಅನೇಕ ಯೋಜನೆಗಳನ್ನು ಹಾಕಿಕೊಂಡಿದೆ. ಶಾಸನಗಳ ಜಿಲ್ಲಾ ಸೂಚಿಯನ್ನು ಪ್ರಕಟಿಸುವ ಕಾರ್ಯವು ಪ್ರಾರಂಭವಾಗಿದ್ದು ಧಾರವಾಡ ಜಿಲ್ಲೆಯ ಸೂಚಿಯು ಈಗಾಗಲೇ ಹೊರಬಿದ್ದಿದೆ. ಆಂಧ್ರಪ್ರದೇಶದ ಪುರಾತತ್ವ ಇಲಾಖೆಯು ಕನ್ನಡ ಶಾಸನಗಳನ್ನು ಈಗಾಗಲೇ ಪ್ರಕಟಿಸಿದೆ. ಈ ಕಾರ್ಯ ಇನ್ನೂ ಮುಂದುವರಿಯುತ್ತಿದ್ದು, ಆಂಧ್ರದಲ್ಲಿ ದೊರೆತಿರುವ ಕನ್ನಡ ಶಾಸನಗಳು ಅಲ್ಲಿ ಪೂರ್ಣವಾಗಿ ಸೇರುವ ಭರವಸೆಯಿದೆ. ಇವುಗಳ ಜೊತೆಗೆ ಹತ್ತಾರು ತರುಣ ಪೀಳಿಗೆಯ ವಿದ್ವಾಂಸರು

ತಮ್ಮ ಸಂಶೋಧನೆಗಳಿಂದ ಹೊಸ ಶಾಸನಗಳನ್ನು ಬೆಳಕಿಗೆ ತರುತ್ತಿದ್ದಾರೆ ಮತ್ತು ಹಳೆಯ ಶಾಸನಗಳನ್ನು ಪುನರ್‌ಪರೀಕ್ಷಿಸಿ ಇತಿಹಾಸಕ್ಕೆ ಹೊಸ ಸಾಮಗ್ರಿಗಳನ್ನು ಒದಗಿಸುತ್ತಿದ್ದಾರೆ. ಇವೆಲ್ಲವುಗಳಿಂದಾಗಿ ಇಂದು ಕರ್ನಾಟಕ ಶಾಸನ ಶಾಸ್ತ್ರದಲ್ಲಿ ಹೊಸ ಚೈತನ್ಯ ಕಾಣುತ್ತಿದೆ.

## ಅಶೋಕನ ಶಾಸನಗಳು

ಅಶೋಕನ ಶಾಸನಗಳೇ ಕರ್ನಾಟಕದ ಪ್ರಾಚೀನತಮ ಶಾಸನಗಳು. ಇವನ ಶಾಸನಗಳು ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಸಿದ್ಧಾಪುರ, ಮಸ್ಕಿ, ಕೊಪ್ಪಳಗಳಲ್ಲಿ ಬಹಳ ಹಿಂದೆಯೇ ದೊರಕಿದ್ದವು. ಇತ್ತೀಚೆಗೆ ಬಳ್ಳಾರಿ ಜಿಲ್ಲೆಯ ನಿಟ್ಟೂರಿನಲ್ಲಿ ಎರಡು, ಸಿರಗುಪ್ಪೆಯಲ್ಲಿ ಒಂದು ಅಶೋಕನ ಶಾಸನಗಳು ಬೆಳಕಿಗೆ ಬಂದವು. ಇವುಗಳಲ್ಲಿಯೂ ಅಶೋಕ ಎಂಬ ಹೆಸರಿರುವುದು ಗಮನಾರ್ಹವಾದ ವಿಷಯ. ಇಷ್ಟೊಂದು ಅಶೋಕನ ಶಾಸನಗಳು ಕರ್ನಾಟಕದಲ್ಲಿ ದೊರಕಿರುವುದು ಬಲು ಮಹತ್ವದ ಸಂಗತಿ. ಈ ಶಾಸನಗಳು ಅಶೋಕನ ವ್ಯಕ್ತಿತ್ವದ ಮೇಲೆ ಬೆಳಕನ್ನು ಬೀರುವುದಲ್ಲದೆ, ಧರ್ಮಪ್ರಚಾರವನ್ನೂ ಮಾಡುತ್ತವೆ. ಜನಗಳ ಜೀವನವು ಸುಖಮಯವಾಗಲು ಅನುಸರಿಸಬೇಕಾದ ಮಾರ್ಗಗಳನ್ನು ಅಶೋಕನು ಬಲು ಚೆನ್ನಾಗಿ ಹೇಳಿದ್ದಾನೆ. ಅವು ಇಂದಿಗೂ ಮತ್ತು ಎಂದೆಂದಿಗೂ ಉಪಯೋಗಕ್ಕೆ ಬರುವ ದಾರಿದೀಪಗಳಾಗಿವೆ. "ಧರ್ಮಕಾರ್ಯವನ್ನು ಬಡವನೂ ಸಾಧಿಸಬಹುದು. ಇದು ಕೇವಲ ಶ್ರೀಮಂತರಿಗೆ ಮಾತ್ರ ಸಾಧ್ಯ ಎಂದು ಯಾರೂ ಭಾವಿಸಬಾರದು..." ಎಂದು ಮಸ್ಕಿ ಶಾಸನದಲ್ಲಿ ಹೇಳುತ್ತಾನೆ. ಬ್ರಹ್ಮಗಿರಿಯ ಶಾಸನದಲ್ಲಿ "ತಾಯಿ. ತಂದೆ ಮತ್ತು ಹಿರಿಯರ ಆಜ್ಞೆಗಳನ್ನು ಪಾಲಿಸಬೇಕು. ಪ್ರಾಣಿಗಳಲ್ಲಿ ದಯೆ ತೋರಿಸಬೇಕು. ಸತ್ಯವನ್ನೇ ನುಡಿಯಬೇಕು. ಶಿಷ್ಯನು ಗುರುಗಳಿಗೆ ಗೌರವವನ್ನು ತೋರಿಸಬೇಕು. ಬಂಧು ಮಿತ್ರರೊಡನೆ ಯೋಗ್ಯರೀತಿಯಿಂದ ನಡೆಯಬೇಕು" ಎಂದು ಹೇಳಿದೆ. ಈ ರೀತಿಯ ನಿತ್ಯಸತ್ಯಗಳನ್ನು ತಿಳಿಯಲು ಅಶೋಕನ ಶಾಸನಗಳು ಸಹಕಾರಿಯಾಗಿವೆ.

## ಪ್ರಾಕೃತ ಯುಗ

ಅಶೋಕನ ಶಾಸನಗಳನ್ನು ಬಿಟ್ಟರೆ ಕರ್ನಾಟಕದಲ್ಲಿ ಕೆಲವೇ ಸಂಖ್ಯೆಯ ಪ್ರಾಕೃತ ಶಾಸನಗಳು ದೊರಕಿವೆ. ಆದುದರಿಂದ ಕ್ರಿ. ಪೂ. ಮೂರನೆಯ ಶತಮಾನದಿಂದ ಕ್ರಿ. ಶ. ನಾಲ್ಕನೆಯ ಶತಮಾನದವರೆಗಿನ ಕಾಲವನ್ನು



ಬನವಾಸಿ ಮಧುಕೇಶ್ವರ ದೇವಾಲಯದಲ್ಲಿರುವ ನಾಗಪ್ರತಿಮೆ—ಕ್ರಿ.ಶ. ಎರಡನೆಯ ಶತಮಾನಕ್ಕೆ ಸೇರಿದ ಈ ನಾಗಪ್ರತಿಮೆಯನ್ನು ವಿಣ್ಹುಕಡ ಸಾತಕರ್ಣಿಯ ಮಗಳು ಶಿವಸ್ಕಂದ ನಾಗಶ್ರೀ ಮಾಡಿಸಿದ್ದು.

ಪ್ರಾಕೃತ ಶಾಸನಯುಗ ಎಂದು ಕರೆಯಬಹುದು. ಬನವಾಸಿಯಲ್ಲಿ ದೊರೆತಿರುವ ನಾಗರಕಲ್ಲಿನ ಶಾಸನ ಮತ್ತು ಶಿವಶ್ರೀ ಪುಳುಮಾವಿಯ ರಾಣಿಯ ಜ್ಞಾಪಕಾರ್ಥವಾಗಿ ನೆಡಿಸಿದ ಶಾಸನಗಳು ; ಶಿಕಾರಿಪುರದ ಮಳವಳ್ಳಿಯ ಎರಡು ಶಾಸನಗಳು ; ಗುಲ್ಬರ್ಗದ ಬೆಳವಾಡಿಗೆಯ ಶಾಸನ ; ಅದೇ ಜಿಲ್ಲೆಯ ಸನ್ನತಿಯಲ್ಲಿ ದೊರೆತಿರುವ ಸುಮಾರು ನಲವತ್ತು ಶಾಸನಗಳು ; ಹಿರೆಹಡಗಲಿಯ ತಾಮ್ರಶಾಸನ ಮತ್ತು ಚಂದ್ರವಳ್ಳಿಯ ಮಯೂರವರ್ಮನ ಶಾಸನಗಳು ಈ ಗುಂಪಿಗೆ ಸೇರಿದವು. ಬನವಾಸಿಯ ನಾಗರಕಲ್ಲಿನ ಶಾಸನವು ನಾಗರಕಲ್ಲು, ಕೆರೆ ಮತ್ತು ವಿಹಾರಗಳನ್ನು ಶಿವಸ್ಕಂದನಾಗಶ್ರೀ ಎಂಬುವಳು ದಾನಮಾಡಿದ ವಿಷಯವನ್ನು ತಿಳಿಸುತ್ತದೆ. ಇತ್ತೀಚೆಗೆ ಬನವಾಸಿಯಲ್ಲಿ ದೊರೆತ ಮತ್ತೊಂದು ಶಾಸನವು ಸಾತವಾಹನ ದೊರೆ ಶಿವಶ್ರೀ ಪುಳುಮಾವಿಗೆ ಸಂಬಂಧಿಸಿದುದು. ಇದು ಇವನ ಮೊಟ್ಟ ಮೊದಲನೆಯ ಶಾಸನ. ಇದರಲ್ಲಿ ಇವನ ರಾಣಿ ಮಹಾದೇವಿಯ ಜ್ಞಾಪಕಾರ್ಥವಾಗಿ ಆಕೆಯ ಚಿತ್ರ ಕೆತ್ತಿದ್ದ ಸ್ಮಾರಕವೊಂದನ್ನು ಸ್ಥಾಪಿಸಿದ ವಿಷಯವು ಹೇಳಲ್ಪಟ್ಟಿದೆ. ಇದೇ ರೀತಿಯ ಸ್ಮಾರಕ ಶಾಸನವು ಬೆಳವಾಡಿಗೆಯಲ್ಲಿಯೂ ದೊರಕಿದೆ. ಸನ್ನತಿಯಲ್ಲಿ ದೊರಕಿರುವ ಪ್ರಾಕೃತ ಶಾಸನಗಳು ಒಂದೆರಡು ಸಾಲಿನ ಸಣ್ಣ ಸಣ್ಣ ಶಾಸನಗಳಾಗಿದ್ದು ಮುಖ್ಯವಾಗಿ ಆ ಫಲಕಗಳನ್ನು ದಾನಮಾಡಿದ ಬೌದ್ಧರನ್ನು ಹೆಸರಿಸುತ್ತವೆ. ಇವುಗಳಿಂದ ಹೆಚ್ಚಿನ ವಿಷಯಗಳು ತಿಳಿಯುವುದಿಲ್ಲವಾದರೂ, ಬೌದ್ಧ ಧರ್ಮವು ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಲಿತವಾಗಿದ್ದ ವಿಷಯವನ್ನು ಪ್ರಮಾಣ ಪೂರ್ವಕವಾಗಿ ತಿಳಿಸುತ್ತವೆ. ವಡಗಾಂವ್ ಮಾಧವಪುರದ ಶಾಸನ ಮತ್ತು ಹಿರೇಮಗಳೂರಿನ ಶಾಸನಗಳು ಯಜ್ಞಯಾಗಾದಿಗಳ ವಿಷಯವನ್ನು ತಿಳಿಸುತ್ತವೆ. ಇತಿಹಾಸದ ದೃಷ್ಟಿಯಿಂದ ಮಳವಳ್ಳಿಯ ವಿಣ್ಹುಕಡ ಚುಟುಕುಲಾನಂದನ ಶಾಸನವು ಮಹತ್ವವಾದುದು. ಇದೇ ರೀತಿಯಲ್ಲಿ ಕದಂಬ ಮಯೂರಶರ್ಮನ ಚಂದ್ರವಳ್ಳಿಯ ಶಾಸನವೂ ಬಹಳ ಪ್ರಮುಖವಾದುದು: ಕದಂಬ ಮಯೂರಶರ್ಮನು ತ್ರೈಕೂಟ, ಆಭೀರ, ಪಲ್ಲವ, ಪಾರಿಯಾತ್ರಿಕ, ಶಕಸ್ಥಾನ, ಸೇಂದ್ರಕ, ಪುನ್ನಾಟ ಮತ್ತು ಮೌಖರಿಗಳನ್ನು ಸೋಲಿಸಿದ ಸಂಗತಿಯನ್ನು ತಿಳಿಸುತ್ತದೆ. ದುರದೃಷ್ಟದಿಂದ ಶಾಸನದ ಈ ಬಂಡೆಯು ಬಹಳ ಒರಟಾಗಿರುವುದರಿಂದ ಎಲ್ಲೋ ಕೆಲವು ಅಕ್ಷರಗಳು ಮಾತ್ರ ಇಂದು ಕಾಣುತ್ತವೆ.

## ಸಂಸ್ಕೃತ ಯುಗ

ಪ್ರಾಕೃತ ಯುಗದ ಅನಂತರ ಸಂಸ್ಕೃತ ಯುಗ ಆರಂಭವಾಯಿತು. ಆ ಕಾಲದಲ್ಲಿ ಸಂಸ್ಕೃತವು ಅಖಿಲ ಭಾರತ ವ್ಯಾಪ್ತಿಯನ್ನುಳ್ಳದ್ದಾಗಿದ್ದಿತು. ರಾಜ್ಯಾಡಳಿತದ ಭಾಷೆಯೂ ಅದೇ ಆಗಿದ್ದಿತು. ಆದುದರಿಂದ ಶಾಸನಗಳನ್ನು ವಿಶೇಷವಾಗಿ ಸಂಸ್ಕೃತ ಭಾಷೆಯಲ್ಲಿ ಬರೆಯಿಸುವ ಸಂಪ್ರದಾಯ ಭಾರತದ ಇತರ ಭಾಗಗಳಂತೆ ಕರ್ನಾಟಕದಲ್ಲಿಯೂ ಬೆಳೆದು ಬಂದಿತು. ಆದರೆ ಒಂದು ವಿಷಯವನ್ನು ಗಮನದಲ್ಲಿಡಬೇಕು. ರಾಜ್ಯಾದ್ಯಂತ ಬಳಕೆಗೆ ಬಂದ ತಾಮ್ರಪತ್ರವೇ ಮುಂತಾದ ಮುಖ್ಯ ದಾಖಲೆಗಳನ್ನು ಸಂಸ್ಕೃತದಲ್ಲಿಯೇ ಬರೆಯುತ್ತಿದ್ದುದು ಗಮನಾರ್ಹ. ಸಣ್ಣಪುಟ್ಟ ಸಂಗತಿಗಳಿಗೋಸ್ಕರ ನೆಡಿಸುವ ಶಾಸನಗಳು ಸ್ಥಳೀಯ ಪ್ರಾಮುಖ್ಯವನ್ನು ಮಾತ್ರ ಹೊಂದಿರುವ ಶಾಸನಗಳು. ಇವುಗಳನ್ನು ಕನ್ನಡದಲ್ಲಿಯೇ ಬರೆಯುವ ಪ್ರವೃತ್ತಿಯೂ ಬಳಕೆಗೆ ಬಂದಿತು. ದೊಡ್ಡ ದೊಡ್ಡ ತಾಮ್ರ ಶಾಸನಗಳಲ್ಲಿ ಕೂಡ, ಶಾಸನದಲ್ಲಿ ಕಾಣಬರುವ ಮಹಾರಾಜನ ಪ್ರಶಸ್ತಿಭಾಗ ಸಂಸ್ಕೃತದಲ್ಲಿಯೂ, ದಾನವನ್ನು ಉಲ್ಲೇಖಿಸುವ ಭಾಗ ಮಾತ್ರ ಕನ್ನಡದಲ್ಲಿಯೂ ಬರೆಯಲ್ಪಡುತ್ತಿದ್ದಿತು. ಸಾಮಾನ್ಯವಾಗಿ ತಾಮ್ರಪತ್ರಗಳು ಸಂಸ್ಕೃತ ಭಾಷೆಯಲ್ಲಿಯೇ ಇರುತ್ತಿದ್ದವು. ಕದಂಬ, ಗಂಗ, ರಾಷ್ಟ್ರಕೂಟ, ಬಾದಾಮಿ ಚಾಲುಕ್ಯ, ಹೊಯ್ಸಳ, ಸೇವುಣ ಮುಂತಾದ ರಾಜಮನೆತನಗಳವರ ತಾಮ್ರಶಾಸನಗಳು ವಿಶೇಷವಾಗಿ ಸಂಸ್ಕೃತ ಭಾಷೆಯಲ್ಲಿಯೇ ಇವೆ. ಈ ಕಾಲದ ಕೆಲವು ಶಾಸನಗಳಂತೂ ಕಾವ್ಯಮಯವಾಗಿವೆ. ಶಾಂತಿವರ್ಮನ ತಾಳಗುಂದ ಶಾಸನ. ಮೊದಲನೆ ಪುಲಿಕೇಶಿಯ ಬಾದಾಮಿ ಶಾಸನ, ಮೃಗೇಶವರ್ಮನ ಬನವಾಸಿ ಶಾಸನ, ರವಿವರ್ಮನ ಗುಢ್ನಾಪುರದ ಶಾಸನ, ರವಿಕೀರ್ತಿಯ ಐಹೊಳೆ ಶಾಸನ ಹೀಗೆ ಹಲವಾರು ಶಾಸನಗಳು ಈ ಕಾಲದ ಸಂಸ್ಕೃತ ಶಾಸನಗಳಿಗೆ ಒಳ್ಳೆಯ ಉದಾಹರಣೆಗಳಾಗಿವೆ.

## ಕನ್ನಡ ಯುಗ

ಅನಂತರದ ಕಾಲವನ್ನು ಕನ್ನಡ ಯುಗ ಎಂದು ಕರೆಯಬಹುದು. ಕನ್ನಡವನ್ನು ಶಾಸನಗಳಲ್ಲಿ ಬಳಸುವುದು ಸಾಮಾನ್ಯವಾಯಿತು. ದೇಶಭಾಷೆಗಳು ಬೆಳೆದಂತೆ, ಶಾಸನಗಳನ್ನು ಆಯಾ ಪ್ರಾಂತದ ಭಾಷೆಗಳಲ್ಲಿ ಜನಸಾಮಾನ್ಯರೂ ಓದಿ ತಿಳಿದುಕೊಳ್ಳಲು ಅನುಕೂಲವಾಗುವಂತೆ ಬರೆಯಿಸಲು ಪ್ರಾರಂಭ

ವಾಯಿತು. ಹಳ್ಳಿಹಳ್ಳಿಗಳಲ್ಲೂ ಶಾಸನಗಳನ್ನು ಬರೆಯಿಸಲು ಪ್ರಾರಂಭವಾದಂತೆ, ಶಾಸನಗಳಲ್ಲಿ ಕನ್ನಡದ ಬಳಕೆ ಹೆಚ್ಚಿತು. ಜನಸಾಮಾನ್ಯರು ನೆಡಿಸಿದ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಸಣ್ಣಪುಟ್ಟ ದಾನಶಾಸನಗಳು ಕನ್ನಡದಲ್ಲಿದ್ದರೆ ಮಾತ್ರ ಜನಸಾಮಾನ್ಯರಿಗೆ ಅರ್ಥವಾಗುವುದರಿಂದ, ಆ ರೀತಿಯ ಶಾಸನಗಳು ವಿಶೇಷವಾದವು. ಹೀಗಾಗಿ ಸಾವಿರಾರು ಕನ್ನಡ ಶಾಸನಗಳು ಹುಟ್ಟಿಕೊಂಡವು. ಕನ್ನಡ ಸಾಹಿತ್ಯವು ಬೆಳೆದಂತೆ ಕನ್ನಡ ಶಾಸನ ಸಾಹಿತ್ಯವೂ ಬೆಳೆಯಿತು. ನೂರಾರು ಕವಿಗಳು ಕನ್ನಡದಲ್ಲಿ ಶಾಸನಗಳನ್ನು ರಚನೆ ಮಾಡಿ ಶಾಸನ ಕವಿಗಳೆಂದೆನಿಸಿಕೊಂಡಿದ್ದಾರೆ. ಅವರಲ್ಲಿ ಕೆಲವರಂತೂ ಉತ್ತಮ ಸಾಹಿತ್ಯ ಗುಣಗಳುಳ್ಳ ಶಾಸನಗಳನ್ನು ರಚಿಸಿ ಕನ್ನಡ ಸಾಹಿತ್ಯದಲ್ಲಿ ಹೆಸರುವಾಸಿಯಾಗಿದ್ದಾರೆ.

**ಹಲ್ಮಿಡಿ ಶಾಸನ**

ಕನ್ನಡ ಶಾಸನಗಳನ್ನು ವಿಮರ್ಶಿಸುವಾಗ ಹಲ್ಮಿಡಿ ಶಾಸನವನ್ನು ಮರೆಯುವಂತಿಲ್ಲ. ಏಕೆಂದರೆ ಅದೇ ಕನ್ನಡದ ಅತ್ಯಂತ ಪ್ರಾಚೀನ ಶಾಸನ. ಸುಮಾರು ಕ್ರಿ.ಶ. ಐದನೆಯ ಶತಮಾನದ ಮಧ್ಯಭಾಗಕ್ಕೆ ಸೇರಬಹುದಾದ ಈ ಶಾಸನವು ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಹಲ್ಮಿಡಿ ಎಂಬ ಗ್ರಾಮದಲ್ಲಿ ದೊರಕಿದೆ. ಮೃಗೇಶ ಮತ್ತು ನಾಗ ಎಂಬುವರು ಯುದ್ಧದಲ್ಲಿ ಹೋರಾಡಿ ಜಯಶೀಲನಾದ ವಿಜ ಅರಸ ಎಂಬುವನಿಗೆ ಎರಡು ಗ್ರಾಮಗಳನ್ನು ಬಹುಮಾನವಾಗಿ ಕೊಟ್ಟ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಕನ್ನಡದ ಮೊಟ್ಟಮೊದಲನೆಯ ಶಾಸನವು ವೀರರಿಗೆ ಸಂಬಂಧಿಸಿದುದು ಎಂಬುದು ಕನ್ನಡಿಗರಿಗೆ ಹೆಮ್ಮೆಯ ಸಂಗತಿ. ಈ ಶಾಸನವು ಕನ್ನಡ ಭಾಷಾಶಾಸ್ತ್ರದ ದೃಷ್ಟಿಯಿಂದ ವಿಶೇಷ ಮಹತ್ವ ಹೊಂದಿದೆ. ಇಲ್ಲಿ ಉಪಯೋಗಿಸಲ್ಪಟ್ಟಿರುವ ಕನ್ನಡ ಪದಗಳಾದ ನಾಡುಳ್, ವಿಟ್ಟಾರ್, ಕೀಳ್ಬೋನ್ ಮುಂತಾದವು ಹಳಗನ್ನಡದ ರೂಪಗಳಿಗಿಂತ ಇನ್ನೂ ಪ್ರಾಚೀನವಾದವು ಎಂಬುದನ್ನು ತೋರಿಸುತ್ತದೆ. ಅಂದರೆ ಕನ್ನಡ ಭಾಷೆಯು ಪ್ರಾರಂಭ ದೆಸೆಯಲ್ಲಿ ಹೇಗೆ ಇದ್ದಿತು ಎಂಬುದಕ್ಕೆ ಈ ಶಾಸನ ಏಕೈಕ ಉದಾಹರಣೆ. ಇದೇ ಕನ್ನಡ ಮುಂದೆ ವಿಕಾಸಹೊಂದಿ ಇಂದಿನ ಕನ್ನಡವಾಗಿ ಪರಿಣಮಿಸಿದೆ. ಕನ್ನಡ ಶಾಸನಗಳು ವಿಶೇಷವಾಗಿ ಚಾಲುಕ್ಯ, ಹೊಯ್ಸಳ, ರಾಷ್ಟ್ರಕೂಟ, ಸೇವುಣ, ವಿಜಯನಗರ ಮತ್ತು ಮೈಸೂರು ಒಡೆಯರ ಮನೆತನದವರಿಂದ ಹೊರಡಿಸ

ಲ್ಪಟ್ಟವು. ಕರ್ನಾಟಕದ ಶಾಸನಸಂಪತ್ತಿನಲ್ಲಿ ಅರ್ಧಭಾಗಕ್ಕೂ ಹೆಚ್ಚು ಕನ್ನಡ ಶಾಸನಗಳಿವೆ ಎಂದು ಅಂದಾಜು ಮಾಡಲಾಗಿದೆ.

**ತಮಿಳು ಶಾಸನ**

ಕರ್ನಾಟಕದಲ್ಲಿ ಸುಮಾರು ಒಂದು ಸಾವಿರದಷ್ಟು ತಮಿಳು ಭಾಷೆಯ ಶಾಸನಗಳಿವೆಯೆಂದರೆ ಆಶ್ಚರ್ಯವಾಗಬಹುದು. ಪಲ್ಲವರು, ಚೋಳರು, ಹೊಯ್ಸಳರು ಮತ್ತು ವಿಜಯನಗರದ ಮನೆತನಗಳಿಗೆ ಹೆಚ್ಚಾಗಿ ಸೇರಿದ ಈ ಶಾಸನಗಳು ಸಾಮಾನ್ಯವಾಗಿ ಕನ್ನಡ ಭಾಷೆಯ ಶಾಸನಗಳನ್ನೇ ಹೋಲುತ್ತವೆ. ಕೋಲಾರ ಜಿಲ್ಲೆಯಲ್ಲಿ ತಮಿಳು ಶಾಸನಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ದೊರಕಿವೆ. ಬಹು ಆಶ್ಚರ್ಯದ ಸಂಗತಿಯೆಂದರೆ ಕರ್ನಾಟಕದಲ್ಲಿ ತಮಿಳು ಶಾಸನಗಳನ್ನು ವಿಶೇಷವಾಗಿ ಹಾಕಿಸಿದವರೆಂದರೆ ಚೋಳರಲ್ಲ, ಹೊಯ್ಸಳರು. ಕರ್ನಾಟಕದ ಅತ್ಯಂತ ಪ್ರಾಚೀನ ತಮಿಳು ಶಾಸನವೆಂದರೆ ಮುಳಬಾಗಿಲು ತಾಲ್ಲೂಕಿನ ಹೆಬ್ಬಣಿ ಗ್ರಾಮದಲ್ಲಿ ದೊರಕಿರುವ ಕ್ರಿ.ಶ. ಎಂಟನೆಯ ಶತಮಾನದ ಪಲ್ಲವ ದೊರೆ ಮೊದಲನೆಯ ಪರಮೇಶ್ವರವರ್ಮನ ಶಾಸನ. ಇದು ತಮಿಳು ಭಾಷೆಯಲ್ಲಿ ಮತ್ತು ವಟ್ಟೆಳುತ್ತು ಲಿಪಿಯಲ್ಲಿ ಬರೆಯಲ್ಪಟ್ಟಿದೆ. ತಮಿಳು ಶಾಸನಗಳು ಅನೇಕ ಚಾರಿತ್ರಿಕ ಮತ್ತು ಸಾಮಾಜಿಕ ವಿಷಯಗಳನ್ನು ತಿಳಿಸುತ್ತವೆ.

**ತೆಲುಗು ಶಾಸನ**

ಕರ್ನಾಟಕದಲ್ಲಿ ಸುಮಾರು ನಾಲ್ಕುನೂರು ತೆಲುಗು ಭಾಷೆಯ ಶಾಸನಗಳಿವೆ. ಇವುಗಳಲ್ಲಿ ಅರ್ಧಕ್ಕಿಂತ ಹೆಚ್ಚು ಕೋಲಾರ ಜಿಲ್ಲೆಯಲ್ಲಿ ದೊರಕಿವೆ. ಕೋಲಾರವು ಆಂಧ್ರಪ್ರದೇಶ ಮತ್ತು ಕರ್ನಾಟಕದ ಗಡಿ ಪ್ರದೇಶದಲ್ಲಿರುವುದೇ ಇದಕ್ಕೆ ಕಾರಣ. ಕರ್ನಾಟಕದಲ್ಲಿ ದೊರಕಿರುವ ಅತ್ಯಂತ ಪ್ರಾಚೀನ ತೆಲುಗು ಭಾಷೆಯ ಶಾಸನ ರಾಯಚೂರಿನಲ್ಲಿ ದೊರಕಿದೆ. ಇದರ ಕಾಲ ಕ್ರಿ.ಶ. ೧೨೯೪. ಇದು ಗೋನವಂಶದ ಗನ್ನಯ್ಯರೆಡ್ಡಿಯು ವರ್ಧಮಾನಪುರದಿಂದ ರಾಜ್ಯವನ್ನಾಳುತ್ತಿದ್ದ ವಿಷಯವನ್ನು ತಿಳಿಸುತ್ತದೆ. ತೆಲುಗು ಶಾಸನಗಳು ವಿಶೇಷವಾಗಿ ವಿಜಯನಗರದ ರಾಜರುಗಳಿಗೆ ಸೇರಿವೆ. ಈ ತೆಲುಗು ಶಾಸನಗಳ ಮೇಲೆ ಕನ್ನಡ ಶಾಸನಗಳು ವಿಶೇಷ ಪ್ರಭಾವ ಬೀರಿವೆಯೆನ್ನುವುದು ಅವುಗಳನ್ನು ನೋಡಿದ ತಕ್ಷಣವೇ ತಿಳಿಯುತ್ತದೆ.

**ಪರ್ಷಿಯನ್ ಶಾಸನ**

ಕರ್ನಾಟಕದ ಕೆಲವು ಭಾಗಗಳಲ್ಲಿ ಮುಹಮ್ಮದೀಯರ ಆಳ್ವಿಕೆಯು ಪ್ರಾರಂಭವಾದ ಮೇಲೆ ಪರ್ಷಿಯನ್ ಮತ್ತು ಅರೇಬಿಕ್ ಭಾಷೆಯ ಶಾಸನಗಳು ಇಲ್ಲಿ ಕಾಣಿಸಲಾರಂಭಿಸಿದವು. ಇವು ಕ್ರಿ.ಶ. ಹದಿನಾಲ್ಕನೆಯ ಶತಮಾನದಿಂದ ಕರ್ನಾಟಕದಲ್ಲಿ ಕಂಡುಬರುತ್ತವೆ. ಅಲ್ಲಾವುದ್ದೀನ್ ಖಿಲ್ಜಿಯ ಕ್ರಿ.ಶ. ೧೩೧೫ನೆಯ ವರ್ಷದ ಶಾಸನವೇ ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಪರ್ಷಿಯನ್ ಶಾಸನ. ಇದು ಬಿಜಾಪುರ ಜಿಲ್ಲೆಯ ರಕ್ಕಸಗಿ ಎಂಬಲ್ಲಿ ದೊರಕಿದೆ. ಆದಿಲ್‌ಷಾಹಿ, ಬರೀದ್‌ಷಾಹಿ, ಬಹಮನಿ, ಹೈದರ್ ಮತ್ತು ಟಿಪ್ಪೂಸುಲ್ತಾನರ ಕಾಲದಲ್ಲಿ ಈ ಭಾಷೆಯ ಶಾಸನಗಳು ವಿಶೇಷವಾದವು. ಸಂಖ್ಯೆಯ ದೃಷ್ಟಿಯಿಂದ ಈ ಶಾಸನಗಳು ಬೀದರ್, ಬಿಜಾಪುರ, ರಾಯಚೂರು, ಗುಲ್ಬರ್ಗ, ಮಂಡ್ಯ, ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳಲ್ಲಿ ವಿಶೇಷವಾಗಿ ದೊರೆಕಿವೆ. ಈ ಶಾಸನಗಳು ಸಾಮಾನ್ಯವಾಗಿ ಮಸೀದಿಗಳು, ಅರಮನೆಗಳು, ಉದ್ಯಾನಗಳು, ಬಾವಿಗಳು, ಕೋಟೆಗಳು, ಹೆಬ್ಬಾಗಿಲುಗಳು ಮುಂತಾದವುಗಳ ನಿರ್ಮಾಣಕಾರ್ಯವನ್ನು ತಿಳಿಸುತ್ತವೆ. ವಿಶೇಷವಾಗಿ ಈ ಶಾಸನಗಳು ಹಿಜಿರ ಎಂಬ ಶಕೆಯಲ್ಲಿವೆ. ಅನೇಕ ಈ ಶಾಸನಗಳು ಪರ್ಷಿಯನ್ ಮತ್ತು ಕನ್ನಡ ಭಾಷೆಗಳಲ್ಲಿ ಇಲ್ಲವೆ ಮರಾಠೀ ಭಾಷೆಯಲ್ಲಿಯೂ ಇರುತ್ತವೆ. ಸಿರಗುಪ್ಪದಲ್ಲಿರುವ ಒಂದು ಶಾಸನವು ಮೂರು ಭಾಷೆಯಲ್ಲಿದೆ. ಪರ್ಷಿಯನ್, ಕನ್ನಡ ಮತ್ತು ಮರಾಠಿ ಭಾಷೆಗಳಲ್ಲಿರುವ ಈ ಶಾಸನವು ಆಸಕ್ತಿಯನ್ನು ಕೆರಳಿಸುತ್ತದೆ. ಇತರ ಭಾಷೆಯ ಶಾಸನಗಳಂತೆ ಪರ್ಷಿಯನ್ ಭಾಷೆಯ ಶಾಸನಗಳೂ ಕರ್ನಾಟಕದ ಇತಿಹಾಸ ರಚನೆಗೆ ವಿಶೇಷವಾಗಿ ಸಹಾಯ ಮಾಡುತ್ತವೆ.

## ಕನ್ನಡನಾಡಿನ ಹೊರಗೆ

ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದ ಶಾಸನಗಳು ಇಂದಿನ ಕರ್ನಾಟಕದ ಗಡಿಯ ಹೊರಗಡೆಯೂ ಸಾಕಷ್ಟು ಸಂಖ್ಯೆಯಲ್ಲಿ ದೊರಕಿವೆ. ಅದರಲ್ಲಿಯೂ ನಮಗೆ ಹೆಮ್ಮೆ ತರುವಂತಹ ಸಂಗತಿ ಎಂದರೆ ನೂರಾರು ಕನ್ನಡ ಭಾಷೆಯ ಶಾಸನಗಳು ಆಂಧ್ರ, ತಮಿಳುನಾಡು, ಕೇರಳ, ಮಹಾರಾಷ್ಟ್ರ, ಮಧ್ಯಪ್ರದೇಶ, ಬಿಹಾರ, ಉತ್ತರಪ್ರದೇಶ ಮುಂತಾದ ಕಡೆಗಳಲ್ಲಿ ದೊರಕಿವೆ. ಕರ್ನಾಟಕದ ನೆರೆ ರಾಜ್ಯಗಳಾದ ಆಂಧ್ರ, ತಮಿಳುನಾಡು, ಕೇರಳ, ಮಹಾರಾಷ್ಟ್ರಗಳಲ್ಲಿ ಕನ್ನಡ ಶಾಸನಗಳು ದೊರೆಯುವುದು ಸಹಜವಾದ ವಿಷಯವೇ

ಸರಿ. ಆದರೆ ಇವು ದೂರದೇಶಗಳಾದ ಮಧ್ಯಪ್ರದೇಶ ಮತ್ತು ಉತ್ತರ ಪ್ರದೇಶಗಳಲ್ಲಿ ದೊರಕಿರುವುದು ವಿಶೇಷವಾಗಿ ಗಮನಿಸಬೇಕಾದ ಸಂಗತಿ. ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಜುರಾ ಪ್ರಶಸ್ತಿ ಮಧ್ಯಪ್ರದೇಶದಲ್ಲಿ ದೊರಕಿದ್ದು, ಈ ರಾಜನ ಶೌರ್ಯ ಪರಾಕ್ರಮಗಳಿಗೆ ಕನ್ನಡಿ ಹಿಡಿದಿದೆ. ಬಿಹಾರದ ಖ್ಯಾತ ಯಾತ್ರಾಸ್ಥಳವಾದ ಗಯೆಯಲ್ಲಿ ಎರಡು ಹೊಯ್ಸಳರ ಕಾಲದ ಕನ್ನಡ ಭಾಷೆಯ ಶಾಸನಗಳು ದೊರಕಿವೆ. ಒಂದು ಶಾಸನದಲ್ಲಿ ಕರ್ನಾಟಕದಿಂದ ಈ ಯಾತ್ರಾಸ್ಥಳಕ್ಕೆ ಹೋಗುವವರಿಗಾಗಿ ಛತ್ರವನ್ನು ಕಟ್ಟಿಸಿದ ವಿಷಯ ಹೇಳಲ್ಪಟ್ಟಿದೆ.

ಕಾಶಿಯಲ್ಲಿ ದೊರಕಿರುವ ಮೂರು ಕನ್ನಡ ಶಾಸನಗಳು ಗಮನಾರ್ಹವಾದವು. ಸಂಸ್ಕೃತ, ಕನ್ನಡ ಮತ್ತು ಸ್ಥಳೀಯ ಭಾಷೆಯಲ್ಲಿರುವ ಈ ಶಾಸನದ ಕಾಲ ಕ್ರಿ. ಶ. ೧೬೫೫-೫೬. ಕೆಳದಿ ಶಿವಪ್ಪನಾಯಕ ಮತ್ತು ವೆಂಕಟಪ್ಪನಾಯಕರು ಕಪಿಲಧಾರಾ ತೀರ್ಥ ಎಂಬ ಕಲ್ಯಾಣಿಯನ್ನು ಜೀರ್ಣೋದ್ಧಾರಗೊಳಿಸಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಕಾಂಚೀಪುರದಲ್ಲಿ ದೊರಕಿರುವ ಎರಡನೆಯ ವಿಕ್ರಮಾದಿತ್ಯನ ಶಾಸವನ್ನು ಗಮನಿಸಬೇಕು. ಈ ದೊರೆಯು ಪಲ್ಲವರನ್ನು ಸೋಲಿಸಿ ಕಾಂಚಿಯನ್ನು ತನ್ನ ವಶಮಾಡಿಕೊಂಡ ಮೇಲೆ, ರಾಜಸಿಂಹೇಶ್ವರ ದೇವಾಲಯಕ್ಕೆ ಭೇಟಿಕೊಟ್ಟು, ಆ ದೇವಾಲಯದ ಆಸ್ತಿಪಾಸ್ತಿಗಳನ್ನು ಪರಿಶೀಲಿಸಿ, ಆ ಎಲ್ಲವನ್ನೂ ಆ ದೇವಾಲಯಕ್ಕೇ ಹಿಂದಿರುಗಿಸಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಕರ್ನಾಟಕದ ರಾಜನೊಬ್ಬನ ಧಾರ್ಮಿಕ ಪ್ರವೃತ್ತಿಗೆ ಈ ಶಾಸನ ಅತ್ಯಂತ ಉತ್ತಮ ಉದಾಹರಣೆ ಎನ್ನಲು ಯಾವ ಅಡ್ಡಿಯೂ ಇಲ್ಲ. ಈ ರೀತಿ ಶಾಸನ ಶಾಸ್ತ್ರದಲ್ಲಿ ಕರ್ನಾಟಕವು ಪ್ರತಿಯೊಬ್ಬ ಕನ್ನಡಿಗನೂ ಹೆಮ್ಮೆ ಪಡಬೇಕಾದಷ್ಟು ಪ್ರಗತಿಯನ್ನು ಸಾಧಿಸಿದೆ.

## ವಾಸ್ತುಶಿಲ್ಪ

ವಾಸ್ತುಶಿಲ್ಪಕ್ಕೆ ಕರ್ನಾಟಕವು ಪ್ರಾಚೀನ ಕಾಲದಿಂದಲೂ ತವರೂರಾಗಿದ್ದಿತ್ತೆಂದರೆ ಅತಿಶಯೋಕ್ತಿಯಲ್ಲ. ಬೇಲೂರು, ಹಳೇಬೀಡು, ಶ್ರವಣಬೆಳಗೊಳ, ಬಾದಾಮಿ, ಗೋಳಗುಮ್ಮಟ ಮುಂತಾದ ಭವ್ಯ ವಾಸ್ತುಶಿಲ್ಪ ಕೃತಿಗಳ ವಿಷಯವನ್ನು ಕೇಳದ ಜನರಾರೂ ಇಲ್ಲ ಎಂದು ಖಚಿತವಾಗಿ ಹೇಳಬಹುದಾಗಿದೆ. ಬೇಲೂರು ಹಳೇಬೀಡುಗಳಂತೂ ಮನೆಮಾತಾಗಿವೆ. ಉತ್ತರ ಭಾರತದ ಜನಗಳಿಗಂತೂ ಕರ್ನಾಟಕವೆಂದರೆ ಮೊಟ್ಟಮೊದಲು ಹೊಳೆಯು

ವೃದು ಈ ದೇವಾಲಯಗಳು. ಈ ರೀತಿಯ ಭವ್ಯ ಪರಂಪರೆಯು ಪ್ರಗತಿಯು ಹೇಗೆ ಸಾಧಿಸಲ್ಪಟ್ಟಿತು ಎಂಬುದನ್ನು ಈಗ ಗಮನಿಸೋಣ.

ದೈವಶಿಲ್ಪಿಯು ಕರ್ನಾಟಕಕ್ಕೆ ಯಥೇಚ್ಛವಾಗಿ ನಿಸರ್ಗ ಸೌಂದರ್ಯ ವನ್ನು ದಯಪಾಲಿಸಿ ಅದೊಂದು ನಿಸರ್ಗ ಸೌಂದರ್ಯದ ಖನಿಯಾಗುವಂತೆ ಮಾಡಿದ್ದಾನೆ. ಮಾನವ ಶಿಲ್ಪಿಯು ತನ್ನ ಕೈಚಳಕ, ಕಲಾಕುಶಲತೆಗಳಿಂದ ಕಲ್ಲಿನಲ್ಲಿ ಸಾವಿರಾರು ದೇವಾಲಯಗಳನ್ನೂ, ಸುಂದರ ಮೂರ್ತಿಗಳನ್ನೂ ಕೆತ್ತಿ ಕರ್ನಾಟಕವು ವಾಸ್ತುಶಿಲ್ಪ ಕಲೆಗಳ ಗಣಿಯಾಗುವಂತೆ ಮಾಡಿದ್ದಾನೆ. ಇವೆರ ಡನ್ನೂ ನೋಡಿದರೆ ನಮ್ಮ ನಾಡಿನಲ್ಲಿ ದೈವ ಶಿಲ್ಪಿಗೂ, ಮಾನವ ಶಿಲ್ಪಿಗೂ ಒಂದು ವಿಧವಾದ ಸ್ಪರ್ಧೆಯು ನಡೆಯುತ್ತಿದೆಯೋ ಎಂದು ಭಾಸವಾಗುತ್ತದೆ, ಈ ಸ್ಪರ್ಧೆಯಿಂದಾಗಿ ಇದೊಂದು ಸುಂದರ ಕಲಾ ಸಂಗ್ರಹಾಲಯವಾಗಿದೆ.

ಸಂಪದ್ಭರಿತವಾದ ಕನ್ನಡನಾಡಿನಲ್ಲಿ ರಾಜರು ಎಷ್ಟು ಪರಾಕ್ರಮಿಗಳಿ ದ್ದರೋ, ಅಷ್ಟೇ ಕಲಾಪ್ರೇಮಿಗಳೂ ಆಗಿದ್ದರು. ಆದುದರಿಂದ ಪ್ರತಿಯೊಬ್ಬ ರಾಜನೂ ತನ್ನ ಹಿಂದಿನ ರಾಜರುಗಳಿಗಿಂತ ಸುಂದರವಾದ ದೇವಾಲಯಗಳನ್ನೂ ಶಿಲ್ಪಗಳನ್ನೂ ಸೃಷ್ಟಿಸಬೇಕೆಂದು ತನ್ನ ಕೈಲಾದ ಎಲ್ಲ ಪ್ರಯತ್ನಗಳನ್ನೂ ಮಾಡುತ್ತಿದ್ದನು. ಹೀಗಾಗಿ ಇಲ್ಲಿ ಒಂದು ಕಲಾಸ್ಪರ್ಧೆಯೇ ನಡೆಯುತ್ತಿದ್ದಿತು. ಅದರ ಪರಿಣಾಮವಾಗಿ ಸಾವಿರಾರು ದೇವಾಲಯಗಳು, ಸೌಧಗಳು, ಮೂರ್ತಿಗಳು, ಗುಹಾಲಯಗಳು ನಿರ್ಮಾಣವಾದವು. ಮತ್ತೊಂದು ವಿಶೇಷದ ಸಂಗತಿಯೆಂದರೆ ಗುಡಿಗೋಪುರಗಳ ನಿರ್ಮಾಣದ ಜೊತೆಗೆ ರಾಜಮಹಾ ರಾಜರು ತಮ್ಮ ಹಿಂದಿನವರು ನಿರ್ಮಿಸಿದ ದೇವಾಲಯಗಳನ್ನು ಪೋಷಿಸಿ ಕೊಂಡು ಬಂದುದಲ್ಲದೆ, ಅವುಗಳ ಜೀರ್ಣೋದ್ಧಾರ ಕಾರ್ಯವನ್ನೂ ಕೈಗೊಳ್ಳು ತ್ತಿದ್ದರು. ಹೀಗಾಗಿ ಕಲೆಯ ನಿರ್ಮಾಣ, ಅವುಗಳ ಪೋಷಣೆ, ಜೀರ್ಣೋ ದ್ಧಾರ ಅವ್ಯಾಹತವಾಗಿ ಸಾಗುತ್ತಿದ್ದಿತು. ಇದೊಂದು ಉತ್ತಮ ಪರಂಪರೆ ಯಾಗಿ ಬೆಳೆದುಬಂದು ಕಲೆಗಳಿಗೆ ವರವಾಗಿ ಪರಿಣಮಿಸಿತು.

**ವಾಸ್ತುಶಿಲ್ಪದ ಆರಂಭ**

ಕರ್ನಾಟಕದಲ್ಲಿ ವಾಸ್ತುಶಿಲ್ಪ ಎಂದು ಪ್ರಾರಂಭವಾಯಿತು ಎಂಬುದನ್ನು ಹೇಳಲು ಆಧಾರಗಳು ಸಾಲವು. ಇತಿಹಾಸಪೂರ್ವ ಕಾಲದಿಂದಲೇ ಕರ್ನಾಟಕ ದಲ್ಲಿ ಕಲೆಗಳು ಬೆಳೆದುಬಂದಿದ್ದವು ಎಂಬುದನ್ನು ಮಾತ್ರ ಮರೆಯಲಾಗದು. ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಲಿತವಾಗಿದ್ದ ನವಶಿಲಾಯುಗ ಕಾಲದಲ್ಲಿ

ವರ್ಣಚಿತ್ರ ಕಲೆಯು ಉಚ್ಛ್ರಾಯ ಸ್ಥಿತಿಯನ್ನು ಮುಟ್ಟಿತ್ತು ಎನ್ನುವುದು ಬಹುಮಂದಿ ವಿದ್ವಾಂಸರ ಮತ. ಈ ವರ್ಣಚಿತ್ರಗಳು ಅಥವಾ ರೇಖಾಚಿತ್ರಗಳು ವಿಶೇಷವಾಗಿ ಆ ಜನಗಳು ವಾಸಮಾಡುತ್ತಿದ್ದ ಗುಹೆಗಳಲ್ಲಿ ಕಂಡು ಬಂದಿವೆ. ಇವು ಹಿರೆಬೆನಕಲ್ಲು, ಕುಪ್ಪಕಲ್ಲು, ಬಾದಾಮಿ, ತೆಕ್ಕಲಕೋಟೆ, ಚಿಕ್ಕ ರಾಮಪುರ, ಆನೆಗುಂದಿ ಮುಂತಾದ ಕಡೆಗಳಲ್ಲಿವೆ. ಇವುಗಳಲ್ಲಿ ಮನುಷ್ಯ ಮತ್ತು ಪ್ರಾಣಿಗಳ ಚಿತ್ರಗಳಿವೆ. ಈ ಕಾಲದ ಕೆಲವು ಮಡಿಕೆಗಳ ಮೇಲೂ ಈ ರೀತಿಯ ಚಿತ್ರಗಳಿವೆ. ಸುಮಾರು ಕ್ರಿ. ಪೂ. ಎರಡುಸಾವಿರ ವರ್ಷದಷ್ಟು ಪ್ರಾಚೀನವಾದ ಈ ಕಲೆಯಲ್ಲಿ ಪ್ರಾರಂಭ ದೆಶೆಯು ಎದ್ದು ಕಾಣುತ್ತದೆ.

ಇತಿಹಾಸಪೂರ್ವ ಕಾಲವನ್ನು ಬಿಟ್ಟು ಚಾರಿತ್ರಿಕ ಯುಗಕ್ಕೆ ಬಂದರೆ ಮಾಹಿತಿಗಳು ಹೆಚ್ಚುತ್ತವೆ. ಕರ್ನಾಟಕವು ಮೌರ್ಯದೊರೆಗಳ ಆಡಳಿತಕ್ಕೆ ಒಳಪಟ್ಟಿದ್ದಿತು ಎಂಬುದಕ್ಕೆ ಸಾಕಷ್ಟು ಮಾಹಿತಿಗಳಿವೆ. ಆದರೆ ಖಚಿತವಾಗಿ ಮೌರ್ಯರ ಕಾಲಕ್ಕೆ ಸೇರಬಹುದಾದ ಅವಶೇಷಗಳು ಕರ್ನಾಟಕದಲ್ಲಿ ದೊರಕಿಲ್ಲ. ಅಶೋಕನ ಶಾಸನಗಳನ್ನು ಬಿಟ್ಟರೆ ಇಲ್ಲಿ ಆ ಕಾಲಕ್ಕೆ ಸಂಬಂಧಿಸಿದ ವಾಸ್ತುಶಿಲ್ಪ ಕೃತಿಗಳು ಯಾವುದೂ ದೊರಕಿಲ್ಲ. ಆ ಕಾಲದಲ್ಲಿ ವಾಸ್ತುಕೃತಿಗಳು ಮರದಿಂದ ನಿರ್ಮಿತವಾಗುತ್ತಿದ್ದವು. ಆದುದರಿಂದ ಈ ರೀತಿ ಮರದಿಂದ ನಿರ್ಮಿತವಾಗಿದ್ದಿರಬಹುದಾದ ಯಾವ ಕಟ್ಟಡಗಳೂ ಉಳಿದುಬಂದಿಲ್ಲ. ಶ್ರವಣಬೆಳಗೊಳವಲ್ಲಿರುವ ಈಗಿನ ಚಂದ್ರಗುಪ್ತ ಬಸದಿಯು ಮೌರ್ಯರ ಕಾಲಕ್ಕೆ ಸೇರಿದ್ದಂತೂ ಅಲ್ಲ. ಆದರೆ ಅಲ್ಲಿ ಪ್ರಚಲಿತವಿರುವ ಕಥೆಗಳ ಪ್ರಕಾರ ಅದು ಮೌರ್ಯ ಕಾಲಕ್ಕೇ ಸೇರಬೇಕು. ಬಹುಶಃ ಅದೇ ಸ್ಥಳದಲ್ಲಿ ಮೌರ್ಯರ ಕಾಲಕ್ಕೆ ಸೇರಿದ್ದಿರಬಹುದಾದ ಮರದ ಕಟ್ಟಡವಿದ್ದಿರಬಹುದು. ಅದು ನಾಶವಾದ ಮೇಲೆ ಅಲ್ಲಿ ಈಗಿನ ಕಲ್ಲಿನ ಕಟ್ಟಡ ನಿರ್ಮಾಣವಾಗಿರಬೇಕೆಂದು ಊಹಿಸಬಹುದು.

ಮೌರ್ಯರ ಅನಂತರ ಕರ್ನಾಟಕವು ಸಾತವಾಹನರ ಆಳ್ವಿಕೆಗೆ ಒಳಪಟ್ಟಿದ್ದಿತು ಎಂಬ ಅಂಶವು ಇಲ್ಲಿ ದೊರಕಿರುವ ಶಾಸನಗಳು ಮತ್ತು ನಾಣ್ಯಗಳಿಂದ ತಿಳಿಯುತ್ತದೆ. ಆದರೆ ಇವರ ಕಾಲದ ವಾಸ್ತುಶಿಲ್ಪ ಕೃತಿಗಳೂ ಕಡಿಮೆಯೆಂದೇ ಹೇಳಬೇಕು. ಗುಲ್ಬರ್ಗ ಜಿಲ್ಲೆಯ ಸನ್ನತಿ ಎಂಬಲ್ಲಿ ಸಾತವಾಹನ ಕಾಲದ ವಾಸ್ತುಶಿಲ್ಪ ಅವಶೇಷಗಳು ಬೆಳಕಿಗೆ ಬಂದಿವೆ. ಇಲ್ಲಿ ಆ ಕಾಲದ ಇಟ್ಟಿಗೆಯ ಸ್ತೂಪಗಳು, ಅವುಗಳನ್ನು ಅಲಂಕರಿಸಲು ಬಳಸಿದ್ದ ಶಿಲ್ಪ ಫಲಕ

ಗಳು, ಇಟ್ಟಿಗೆಗಳು ಮುಂತಾದವು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಇಲ್ಲಿ ಆ ಕಾಲದ ಒಂದು ಕೋಟೆಯೂ ಬೆಳಕಿಗೆ ಬಂದಿದೆ. ಇಲ್ಲಿ ವಿಶೇಷವಾಗಿ ನಮ್ಮ ಗಮನ ಸೆಳೆಯುವ ವಸ್ತುಗಳೆಂದರೆ ಬೌದ್ಧಧರ್ಮಕ್ಕೆ ಸೇರಿದ ಶಿಲ್ಪ ಫಲಕಗಳು. ಮಣ್ಣಿನ ಮತ್ತು ಇಟ್ಟಿಗೆಯ ಸ್ತೂಪಗಳ ಅಂಡಗಳನ್ನು ಅಲಂಕರಿಸುವುದಕ್ಕೋಸ್ಕರ ನೂರಾರು ಶಿಲ್ಪ ಫಲಕಗಳು ಇಲ್ಲಿ ತಯಾರಾದವು. ಅವುಗಳಲ್ಲಿ ಬುದ್ಧನ ಜನನ ಮತ್ತು ಜೀವನಕ್ಕೆ ಸಂಬಂಧಿಸಿದ ಶಿಲ್ಪಗಳು, ಜಾತಕ ಕಥೆಗಳು ವಿಶೇಷವಾಗಿವೆ. ಆಯಕ ಸ್ತಂಭಗಳು ಅವುಗಳ ಮೇಲಿರುವ ಸುಂದರ ಶಾಸನಗಳಿಂದಲೂ ಮತ್ತು ಶಿಲ್ಪಗಳಿಂದಲೂ ನಯನಮನೋಹರಗಳಾಗಿವೆ. ಅಮರಾವತಿ ಮತ್ತು ನಾಗಾರ್ಜುಕೊಂಡದ ಕಲೆಯನ್ನು ನಮ್ಮ ಜ್ಞಾಪಕಕ್ಕೆ ತರುತ್ತವೆ. ಇಲ್ಲಿ ದೊರಕಿರುವ ಮಣ್ಣಿನ ವಿಗ್ರಹಗಳು ಗಾತ್ರದಲ್ಲಿ ಸಣ್ಣವಾದರೂ, ಕಲಾತ್ಮಕವಾಗಿದ್ದು ಆ ಕಲೆಯ ಹೆಚ್ಚಳವನ್ನು ಸಾರುತ್ತವೆ.

**ಬನವಾಸಿ**

ಬನವಾಸಿಯಲ್ಲಿ ನಡೆದ ಉತ್ಖನನಗಳಿಂದ ಸಾತವಾಹನ ಕಾಲದ ಎರಡು ಇಟ್ಟಿಗೆಯ ದೇವಾಲಯಗಳು ಬೆಳಕಿಗೆ ಬಂದಿವೆ. ಗಜಪೃಷ್ಠಾಕಾರದ ಈ ಇಟ್ಟಿಗೆಯ ದೇವಾಲಯಗಳು ಬಹಳ ವಿಶಾಲವಾಗಿದ್ದು, ಸಾತವಾಹನ ಕಾಲದ ಇಟ್ಟಿಗೆಯ ವಾಸ್ತುಕೃತಿಗೆ ಉತ್ತಮ ಉದಾಹರಣೆ ಎನಿಸಿದೆ, ಈ ಉತ್ಖನನದಲ್ಲಿ ದೊರಕಿದ ಯಕ್ಷ ಮತ್ತು ಯಕ್ಷಿಯರ ಮಣ್ಣಿನ ವಿಗ್ರಹಗಳು ಬಲು ಸುಂದರವಾಗಿದ್ದು, ಉತ್ತರ ಭಾರತದ ಮಥುರಾ ಕಲೆಯನ್ನು ನಮಗೆ ಜ್ಞಾಪಿಸುತ್ತವೆ. ವಡಗಾಂವ್ ಮಾಧವಪುರದಲ್ಲಿ ನಡೆದ ಉತ್ಖನನಗಳಿಂದ ಸಾತವಾಹನ ಕಾಲದ ನಗರದ ಭಾಗವೊಂದು ಬೆಳಕಿಗೆ ಬಂದಿದೆ. ಇಟ್ಟಿಗೆಯ ಕಟ್ಟಡಗಳನ್ನು ಒಳಗೊಂಡಿರುವ ಈ ನಗರದ ಭಾಗವು ಸಾತವಾಹನ ಕಾಲದ ಉತ್ತಮ ವಾಸ್ತುಶಿಲ್ಪಕ್ಕೆ ಸಾಕ್ಷಿಯಾಗಿದೆ. ಬನವಾಸಿಯಲ್ಲಿ ಬ್ರಾಹ್ಮೀ ಶಾಸನವಿರುವ ನಾಗರಕಲ್ಲು ಇದೇ ಕಾಲಕ್ಕೆ ಸೇರಿದ್ದು, ಕಲ್ಲಿನ ಶಿಲ್ಪಕ್ಕೆ ಒಳ್ಳೆಯ ಉದಾಹರಣೆಯಾಗಿದೆ. ಬನವಾಸಿ, ವಡಗಾಂವ್ ಮಾಧವಪುರ, ಸನ್ನತಿ ಮುಂತಾದ ಕಡೆಗಳಲ್ಲಿ ಇನ್ನೂ ಹೆಚ್ಚಿನ ಉತ್ಖನನಗಳು ನಡೆದಲ್ಲಿ ಸಾತವಾಹನ ಕಾಲದ ವಾಸ್ತುಶಿಲ್ಪ ಕೃತಿಗಳ ಪರಿಚಯ ಹೆಚ್ಚುವುದರಲ್ಲಿ ಸಂದೇಹವಿಲ್ಲ.

**ಕದಂಬರು**

ಸಾತವಾಹನರ ಅನಂತರ ಬನವಾಸಿಯ ಕದಂಬರು ಕರ್ನಾಟಕದಲ್ಲಿ ಆಳಿ



ಜೈನ ಬಸದಿ, ಹಲಸಿ

ದರು. ಅನೇಕ ವಿಷಯಗಳಲ್ಲಿ ಕರ್ನಾಟಕ ಸಂಸ್ಕೃತಿಗೆ ತಳಹದಿಯನ್ನು ಹಾಕಿದವರು ಬನವಾಸಿ ಕದಂಬರು. ವಾಸ್ತುಶಿಲ್ಪ ಕಲೆಗಳಲ್ಲಿಯೂ ಕದಂಬರು ತಮ್ಮದೇ ಆದ ಕೊಡುಗೆಗಳನ್ನು ನೀಡಿದರು. ಮೊಟ್ಟಮೊದಲನೆಯದಾಗಿ ದೇವಾಲಯಕ್ಕೆ ಅಂತರಾಳವೆಂಬ ಹೊಸ ಅಂಗವು ಈ ಕಾಲದಲ್ಲಿ ಸೇರಿಸಲ್ಪಟ್ಟಿತು. ಅಂದರೆ ಗರ್ಭಗೃಹದ ಜೊತೆಗೆ ಇನ್ನೊಂದು ಅಂಕಣವನ್ನು ಸೇರಿಸಿ, ದೇವಾಲಯದ ಬೆಳವಣಿಗೆಗೆ ಅಣಿಮಾಡಿಕೊಟ್ಟವರು ಬನವಾಸಿಯ ಕದಂಬರು. ಆದರೆ ಇವರ ದೇವಾಲಯಗಳು ಬಹಳ ಸಣ್ಣ ಪ್ರಮಾಣದವು. ಹೆಚ್ಚಿನ ಗಾತ್ರದಿಂದ ಕೂಡಿದ ವಿಶಾಲವಾದ ಕಟ್ಟಡಗಳಲ್ಲ. ಇನ್ನೊಂದು ವಿಷಯದಲ್ಲಿಯೂ ಬನವಾಸಿ ಕದಂಬರು ಗಮನಾರ್ಹರು. ದೇವಾಲಯದ ಶಿಖರವನ್ನು ನಿರ್ಮಾಣ ಮಾಡುವುದರಲ್ಲಿಯೂ ಒಂದು ಹೊಸ ಪ್ರಯೋಗ ನಡೆಸಿದರು. ಬಲು ಸಣ್ಣ ಪ್ರಮಾಣದ ಇವರ ದೇವಾಲಯದ ಶಿಖರಗಳು ಕದಂಬ ನಾಗರ ಎಂದು ಖ್ಯಾತವಾಗಿವೆ. ಎರಡು ಅಥವಾ ಮೂರು ಅಂತಸ್ತುಗಳ ಕಲ್ಲು ಚಪ್ಪಡಿಗಳನ್ನು ಒಂದರ ಮೇಲೆ ಒಂದು ಇಟ್ಟು ನಿರ್ಮಿಸಿರುವ ಈ ಶಿಖರವು ಮುಂದಿನ ಭಾರತೀಯ ವಾಸ್ತುಶಿಲ್ಪಿಗೆ ಅನೇಕ ಹೊಸ ನಮೂನೆಗಳನ್ನು ಕೊಟ್ಟಿತು. ಹಲಸಿಯಲ್ಲಿರುವ ಜೈನ ಬಸದಿಯೇ ಬನವಾಸಿ ಕದಂಬರ ಅತ್ಯಂತ ಹಳೆಯ ದೇವಾಲಯ; ಬಹುಶಃ ಕದಂಬ ಮೃಗೇಶವರ್ಮನಿಂದ ರಚಿತವಾಗಿರಬೇಕು. ಇಂದಿನ ಬನವಾಸಿಯ ಹತ್ತಾರು ಶಿಥಿಲವಾದ ಕಟ್ಟಡಗಳೂ ಈ ಕಾಲದವು. ತಾಳಗುಂದದ ಪ್ರಣವೇಶ್ವರ ದೇವಾಲಯದ ಗರ್ಭಗೃಹವೂ ಈ ಕಾಲಕ್ಕೆ ಸೇರಬೇಕು. ಈ ಕಾಲದ ಶಿಲ್ಪಗಳೂ ಬಲು ಕಡಿಮೆ. ಬನವಾಸಿಯಲ್ಲೇ ಇರುವ ಮಧುಕೇಶ್ವರ ದೇವಾಲಯವು ಇತ್ತೀಚಿನ ಅಂಶಗಳನ್ನು ವಿಶೇಷವಾಗಿ ಒಳಗೊಂಡು ಪ್ರಾಚೀನ ಕದಂಬರು ನೀಡಿದ ಕೊಡುಗೆಯನ್ನು ತಿಳಿಯುವುದು ಕಷ್ಟವಾಗಿದೆ.

## ಬಾದಾಮಿ ಚಾಲುಕ್ಯ ವಾಸ್ತುಶಿಲ್ಪ

ಬನವಾಸಿಯ ಕದಂಬರ ಅನಂತರ ಕರ್ನಾಟಕವು ಬಾದಾಮಿ ಚಾಲುಕ್ಯರ ಅಧೀನಕ್ಕೆ ಒಳಪಟ್ಟಿತು. ಇವರು ಕರ್ನಾಟಕ ವಾಸ್ತುಶಿಲ್ಪಕ್ಕೆ ವಿಶೇಷ ಕೊಡುಗೆಯನ್ನು ನೀಡಿ ಅಮರರಾಗಿದ್ದಾರೆ. ಇವರ ವಾಸ್ತುಶಿಲ್ಪ ಕೃತಿಗಳು ವಿಶೇಷವಾಗಿ ಐಹೊಳೆ, ಪಟ್ಟದಕಲ್ಲು, ಬಾದಾಮಿ ಮತ್ತು ಮಹಾಕೂಟಗಳಲ್ಲಿವೆ. ಐಹೊಳೆಯಲ್ಲಿ ಸುಮಾರು ನೂರಿಪ್ಪತ್ತಕ್ಕೂ ಹೆಚ್ಚು ದೇವಾಲಯಗಳಿವೆ.

ಇವು ಕೂಡ ನಾಗರ, ವೇಸರ ಮತ್ತು ದ್ರಾವಿಡ ಎಂಬ ವಿವಿಧ ಶೈಲಿಗೆ ಸೇರಿವೆ. ಇಲ್ಲಿ ಒಂದು ಕಾಲೇಜು ಅಥವಾ ಪ್ರಯೋಗ ಶಾಲೆಯಿದ್ದು, ಭಾರತದ ನಾನಾ ಭಾಗಗಳಿಂದ ಶಿಲ್ಪಿಗಳು ಬಂದು ಸೇರಿ ದೇವಾಲಯದ ವಾಸ್ತುಶಿಲ್ಪ ಯಾವ ರೀತಿ ಇರಬೇಕೆಂದು ಪ್ರಯೋಗ ನಡೆಸುತ್ತಿದ್ದರು. ಆದುದರಿಂದ ಇದೊಂದು ವಾಸ್ತುಶಿಲ್ಪ ಪ್ರಯೋಗ ಶಾಲೆಯಾಗಿ ಪರಿಣಮಿಸಿತು. ಈ ರೀತಿ ವಿವಿಧ ಶೈಲಿಯ ದೇವಾಲಯಗಳನ್ನು ಕಾಣುವುದು ಇಲ್ಲಿಯೇ. ಇದರಿಂದಾಗಿ ವಾಸ್ತು ಶೈಲಿಯ ಸಂಗಮವೆನಿಸಿದೆ ಐಹೊಳೆ. ಆದರೆ ಇವರು ಕಂಡುಹಿಡಿದ ಶೈಲಿಯೇ ವೇಸರ ಶೈಲಿ. ಇದನ್ನೇ ಇವರು ಹೆಚ್ಚಾಗಿ ಬಳಸಿ, ಮುಂದಿನ ಪೀಳಿಗೆಗೆ ಕಾಣಿಕೆಯಾಗಿ ಕೊಟ್ಟರು. ಆದುದರಿಂದ ಕೆಲವರು ವೇಸರ ಶೈಲಿಯನ್ನೇ ಚಾಲುಕ್ಯ ಶೈಲಿ ಎಂದೂ ಕರೆಯುತ್ತಾರೆ.

ಈ ಚಾಲುಕ್ಯರ ವಾಸ್ತುಶಿಲ್ಪಗಳು ವಿಶೇಷವಾಗಿ ತಿಳಿಹಳದಿ ಅಥವಾ ನಸುಗೆಂಪು ಬಣ್ಣದ ಮರಳುಗಲ್ಲಿನಲ್ಲಿ ನಿರ್ಮಿತವಾಗಿವೆ. ರಚನೆಯಲ್ಲಿ ಹೆಚ್ಚು ನಯಮಾಡದ ಚಪ್ಪಡಿಗಳು, ಗಾರೆ ಅಥವಾ ಇನ್ಯಾವ ಬಂಧಕ ವಸ್ತುವೂ ಇಲ್ಲದೆ ಒಂದರ ಮೇಲೆ ಒಂದು ಜೋಡಿಸಲ್ಪಟ್ಟಿವೆ. ಇವುಗಳಲ್ಲಿ ಕಂಬಗಳ ಉಪಯೋಗವೂ ಹೆಚ್ಚುತ್ತ ಹೋಗುತ್ತದೆ. ಐಹೊಳೆಯಲ್ಲಿರುವ ಗೌಡರ ಗುಡಿಯೇ ಇವರ ಪ್ರಾಚೀನತಮ ಕೃತಿ. ದುರ್ಗಾಭಗವತಿಯ ದೇವಾಲಯ ವಾಗಿದ್ದು ಆ ದೇವತೆಗೆ ಕಟ್ಟಲಾದ ಮೊಟ್ಟ ಮೊದಲನೆಯ ಗುಡಿಯೂ ಇದಾಗಿದೆ. ಲಾಡ್‌ಖಾನ್ ದೇವಾಲಯವೇ ಮುಂದಿನ ಹಂತ. ಇದರ ಕಾಲ ಸುಮಾರು ಕ್ರಿ. ಶ. ೪೫೦. ಒಂದು ದೊಡ್ಡ ಹಜಾರದಂತಿರುವ ಈ ಗುಡಿಯು ಮರದ ಕಟ್ಟಡವನ್ನು ಅನುಕರಿಸಿದಂತೆ ಕಾಣುತ್ತದೆ. ದೊಡ್ಡ ದೊಡ್ಡ ಕಲ್ಲಿನ ಚಪ್ಪಡಿಗಳನ್ನೇ ಇಳಿಜಾರಾಗಿ ಜೋಡಿಸಿ ಮಾಡಿರುವ ಶಿಖರವೇ ಇದರ ವೈಶಿಷ್ಟ್ಯ. ಇನ್ನೊಂದು ವೈಶಿಷ್ಟ್ಯವೆಂದರೆ ಮಾಳಿಗೆಯ ಮೇಲಿರುವ ಮತ್ತೊಂದು ಗರ್ಭಗೃಹ. ಗಾಳಿ, ಬೆಳಕು ಒಳಗೆ ಬರಲು ಅಳವಡಿಸಿರುವ ಜಾಲಂಧ್ರಗಳು ಮತ್ತೊಂದು ಗಮನಾರ್ಹ ಅಂಶ. ಯಮುನೆ, ರತಿ–ಮನ್ಮಥ, ಬ್ರಹ್ಮ, ಸೂರ್ಯ ಮುಂತಾದ ದೇವತೆಗಳ ಶಿಲ್ಪಗಳೂ ಇಲ್ಲಿವೆ. ದುರ್ಗಾ ದೇವಾಲಯವು ಬೌದ್ಧರ ಚೈತ್ಯಾಕಾರದಂತೆ ಕುದುರೆಯ ಲಾಳದ ಆಕಾರವನ್ನು ಹೊಂದಿರುವ ಕಟ್ಟಡ. ಇದೊಂದು ಅಪರೂಪ ವಿನ್ಯಾಸದ ಕಟ್ಟಡ. ಇಲ್ಲಿರುವ ಶಿಲ್ಪಗಳೂ ಬಲು ಸುಂದರವಾಗಿವೆ. ಸ್ತ್ರೀಪುರುಷರ ಶಿಲ್ಪಗಳು, ರಾಮಾಯಣದ

ಕಥೆ, ಉಗ್ರನರಸಿಂಹ, ಅರ್ಧನಾರೀಶ್ವರ, ವಿಷ್ಣು, ಮಹಿಷಾಸುರಮರ್ದಿನಿ, ಹರಿಹರ ಮುಂತಾದ ಶಿಲ್ಪಗಳು ಗಮನಾರ್ಹ. ಐಹೊಳೆಯಲ್ಲಿರುವ ಇತರ ದೇವಾಲಯಗಳಲ್ಲಿ ಗಮನಾರ್ಹವಾದುದು ಕೊಂತಗುಡಿ, ಹುಚ್ಚಿಮಲ್ಲಿ ಗುಡಿ, ಮೇಗುತಿ ದೇವಾಲಯ ಮತ್ತು ರಾವಳಫಡಿ ಗುಹಾಲಯ. ಮೇಗುತಿ ದೇವಾಲಯದಲ್ಲಿ ಪ್ರಸಿದ್ಧವಾದ ಇಮ್ಮಡಿ ಪುಲಕೇಶಿಯ, ರವಿಕೀರ್ತಿಯಿಂದ ರಚಿತವಾದ ಶಾಸನವಿದೆ. ರಾವಳಫಡಿಯು ಒಂದು ಗುಹಾಲಯ.

ಐಹೊಳೆಯಲ್ಲಿ ಪ್ರಾರಂಭವಾದ ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪವು, ಕಾಲಕ್ರಮದಲ್ಲಿ ಬಾದಾಮಿಯಲ್ಲಿ ವಿಕಾಸಹೊಂದಿತು. ಇಲ್ಲಿ ದೇವಾಲಯಗಳ ಜೊತೆಗೆ ಗುಹಾಲಯಗಳನ್ನೂ ಕಾಣಬಹುದು. ಮೇಲಿನ ಶಿವಾಲಯ, ಕೆಳಗಿನ ಶಿವಾಲಯ, ಜಂಬುಲಿಂಗ ದೇವಾಲಯಗಳು ಮುಖ್ಯವಾದವು. ದೇವಾಲಯದ ಎಲ್ಲ ಭಾಗಗಳೂ, ಅದರಲ್ಲಿಯೂ ಶಿಖರ ಸಾಕಷ್ಟು ವಿಕಾಸವನ್ನು ತೋರ್ಪಡಿಸುತ್ತದೆ. ಆದರೆ ಬಾದಾಮಿಯು ವಿಶೇಷವಾಗಿ ಪ್ರಸಿದ್ಧಿ ಪಡೆದಿರುವುದು ಗುಹಾಲಯಗಳಿಂದ. ಇಲ್ಲಿ ನಾಲ್ಕು ಗುಹಾಲಯಗಳಿವೆ. ಮೊದಲನೆಯದು ಶೈವ; ಎರಡು ಮತ್ತು ಮೂರನೆಯವು ವೈಷ್ಣವ; ಮತ್ತು ಕೊನೆಯದು ಜೈನ ಗುಹೆ. ಗುಡ್ಡವನ್ನೇ ಕೊರೆದು ಮಾಡಿರುವ ಈ ಗುಹಾಲಯಗಳಲ್ಲಿರುವ ಸುಂದರ ಕಂಬಗಳು, ಶಿಲ್ಪಗಳು ನಮ್ಮ ಮನಸೆಳೆಯುತ್ತವೆ. ಮೊದಲನೆಯ ಗುಹೆಯ ನಟರಾಜ, ಎರಡನೆಯ ಗುಹೆಯ ವರಾಹ ಮತ್ತು ನರಸಿಂಹ, ಜೈನ ಗುಹೆಯ ತೀರ್ಥಂಕರರು ಬಹಳ ಸುಂದರ ಶಿಲ್ಪಗಳಾಗಿದ್ದು ಬಾದಾಮಿ ಚಾಲುಕ್ಯರ ಶಿಲ್ಪಕಲೆಯ ಉತ್ತಮ ಮಟ್ಟವನ್ನು ಸಾರುತ್ತದೆ. ಮೂರನೆಯ ಗುಹಾಲಯದಲ್ಲಿರುವ ವರ್ಣಚಿತ್ರಗಳು ನಮ್ಮ ಗಮನವನ್ನು ಸೆಳೆಯುತ್ತವೆ.

ಪಟ್ಟದಕಲ್ಲಿನಲ್ಲಿ ಈ ಕಲೆಯು ಮುಂದಿನ ಹಂತವನ್ನು ಕಾಣುತ್ತೇವೆ. ಪಾಪನಾಥ ದೇವಾಲಯ ನಾಗರಶೈಲಿಯ ವಿಕಾಸ ಹೊಂದಿದ ದೇವಾಲಯ. ಇದು ಬಲು ದೊಡ್ಡದು. ಗರ್ಭಗುಡಿ, ಸುಕನಾಸಿ, ಪ್ರದಕ್ಷಿಣಪಥ, ಮಂಟಪ

ಗಳನ್ನುಳ್ಳ ಈ ದೇವಾಲಯದಲ್ಲಿ ಹತ್ತಾರು ಸುಂದರ ಶಿಲ್ಪಗಳಿವೆ. ಅವುಗಳಲ್ಲಿ ರಾವಣನು ಕೈಲಾಸವನ್ನು ಎತ್ತುತ್ತಿರುವುದು, ನೃತ್ಯ ಗಣಪತಿ, ಹಿರಣ್ಯಕಶಿಪು ಸಂಹಾರ, ನಟರಾಜ ಮುಖ್ಯವಾದವು, ರಾಮಾಯಣದ ಕಥೆಯು ದಕ್ಷಿಣದ ಗೋಡೆಯಲ್ಲಿ ಬಲು ಸುಂದರವಾಗಿ ಕೆತ್ತಲ್ಪಟ್ಟಿದೆ. ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ವಿರೂಪಾಕ್ಷ ದೇವಾಲಯ ಮುಖ್ಯವಾದುದು. ಇಲ್ಲಿ ದ್ರಾವಿಡ ಶೈಲಿಯು ಒಂದು ಘಟ್ಟವನ್ನು ತಲುಪಿದಂತೆ ಕಾಣುತ್ತದೆ. ಇದರಲ್ಲಿ ಕಾಂಚಿಯ ದೇವಾಲಯಗಳ ಪ್ರಭಾವ ಎದ್ದು ಕಾಣುತ್ತದೆ. ಮತ್ತೊಂದು ದ್ರಾವಿಡ ದೇವಾಲಯವೆಂದರೆ ಮಲ್ಲಿಕಾರ್ಜುನ ದೇಗುಲ. ಇಲ್ಲಿ ಬಲು ಸುಂದರ ಶಿಲ್ಪಗಳಿವೆ. ಮಹಾಭಾರತ, ರಾಮಾಯಣ, ಭಾಗವತ ಪುರಾಣಗಳ ಕಥೆಗಳು, ಪಂಚತಂತ್ರದ ಕಪಿ–ಮೊಸಳೆ ಕಥೆ ಇಲ್ಲಿ ಸುಂದರವಾಗಿ ಶಿಲ್ಪಿತವಾಗಿವೆ. ಹೆಚ್ಚಿನ ಅಲಂಕಾರವಿಲ್ಲದ ಬಾದಾಮಿ ಚಾಲುಕ್ಯರ ಶಿಲ್ಪವು ಸೌಂದರ್ಯಕ್ಕೆ ವಿಶೇಷ ಗಮನಕೊಟ್ಟಿದೆ. ಇದೇ ಇದರ ಜೀವಾಳ. ಕಾಲ ಕ್ರಮದಲ್ಲಿ ಬಾದಾಮಿ ಚಾಲುಕ್ಯರ ಪತನದೊಂದಿಗೆ ಈ ವಾಸ್ತುಶಿಲ್ಪ ಕೇಂದ್ರಗಳು ತಮ್ಮ ಗೌರವ ಘನತೆಗಳನ್ನು ಕಳೆದುಕೊಂಡವು.

## ತಲಕಾಡಿನ ಗಂಗರ ವಾಸ್ತುಶಿಲ್ಪ

ಬಾದಾಮಿ ಚಾಲುಕ್ಯರು ಕರ್ನಾಟಕದ ಉತ್ತರ ಭಾಗದಲ್ಲಿ ಆಳುತ್ತಿದ್ದರೆ, ದಕ್ಷಿಣ ಭಾಗದಲ್ಲಿ ತಲಕಾಡಿನ ಗಂಗರು ತಮ್ಮ ರಾಜ್ಯವನ್ನು ಸ್ಥಾಪಿಸಿದ್ದರು. ಗಂಗರ ಅನೇಕ ಮಂದಿರಗಳು ಅವರ ರಾಜಧಾನಿಯಾದ ತಲಕಾಡಿನ ಮರಳಲ್ಲಿ ಹೂತುಹೋಗಿವೆ. ಇವರ ದೇವಾಲಯಗಳು ದ್ರಾವಿಡ ಶೈಲಿಗೆ ಸೇರಿದವು. ಕಗ್ಗಲ್ಲಿನ ಹೆಚ್ಚು ದಪ್ಪವಿಲ್ಲದ ಗಂಗರ ಕಾಲದ ಕಂಬಗಳು ಬುಡದಲ್ಲಿ ಚೌಕವಾಗಿದ್ದು, ಕ್ರಮೇಣ ತುದಿಯ ಕಡೆಗೆ ಗಾತ್ರವು ಕಡಿಮೆಯಾಗುತ್ತ ಹೋಗುತ್ತವೆ. ತಲಕಾಡಿನ ಅರ್ಕೇಶ್ವರ, ಪಾತಾಳೇಶ್ವರ, ಮರಳೇಶ್ವರ ಗಂಗರ ದೇವಾಲಯಗಳು. ಅವರ ಇನ್ನೊಂದು ರಾಜಧಾನಿಯಾಗಿದ್ದ ಮನ್ನೆ ಎಂಬಲ್ಲಿರುವ ಕಪಿಲೇಶ್ವರ ದೇವಾಲಯ, ಮತ್ತು ಅಲ್ಲೇ ಇರುವ ಸೋಮೇಶ್ವರ ದೇವಾಲಯಗಳು ಇಟ್ಟಿಗೆಯ ಕಟ್ಟಡಗಳು. ನರಸಮಂಗಲದ ದೇವಾಲಯವೂ ಇವರ ಕಾಲದ್ದು. ಗಂಗರ ಕಾಲದ ಕೆಲವು ದೇವಾಲಯಗಳನ್ನು ಶ್ರವಣಬೆಳಗೊಳದಲ್ಲಿ ಕಾಣಬಹುದು. ಚಂದ್ರಪ್ರಭ ಬಸದಿ ಕ್ರಿ.ಶ. ೮೦೦ರ ಸಮಯದಲ್ಲಿ ಗಂಗ ದೊರೆ ಶಿವಮಾರ ಕಟ್ಟಿಸಿದ್ದು. ಎರಡು ಅಂತಸ್ತಿನಿಂದ ಕೂಡಿರುವ



ಚಾವುಂಡರಾಯ ಬಸದಿ, ಶ್ರವಣಬೆಳಗೊಳ

ಚಾವುಂಡರಾಯ ಬಸದಿಯನ್ನು ಮಹಾಮಂತ್ರಿ ಚಾವುಂಡರಾಯನು ಕ್ರಿ.ಶ. ೯೮೨ರಲ್ಲಿ ಕಟ್ಟಿಸಿದನು. ಮಾರಸಿಂಹನ ಗೌರವಾರ್ಥವಾಗಿ ನಿರ್ಮಿಸಲಾದ ಬೃಹದಾಕಾರದ ಬ್ರಹ್ಮದೇವರ ಕಂಬವು ಕ್ರಿ. ಶ. ೯೭೪ರಲ್ಲಿಯೂ, ತ್ಯಾಗದ ಬ್ರಹ್ಮದೇವರ ಕಂಬವು ಕ್ರಿ. ಶ. ೬೮೬ರಲ್ಲಿಯೂ ಕೆತ್ತಲ್ಪಟ್ಟವು. ಇವು ಜೈನ ಶಿಲ್ಪದ ವೈಶಿಷ್ಟ್ಯಗಳು. ತುಮಕೂರು ಜಿಲ್ಲೆಯ ಅರಳಗುಪ್ಪೆಯ ಕಲ್ಲೇಶ್ವರ ದೇವಾಲಯವೂ ಗಂಗರ ಕಾಲಕ್ಕೆ ಸೇರಬೇಕು. ಇದರಲ್ಲಿರುವ ನವರಂಗದ ಮೇಲ್ಛಾವಣಿಯಲ್ಲಿರುವ ಶಿವತಾಂಡವ ಶಿಲ್ಪ ಸುಂದರವಾದುದು. ಮಧ್ಯದ ಲ್ಲಿರುವ ಭುವನೇಶ್ವರಿಯಲ್ಲಿ ಎರಡು ಕಡೆಗಳಲ್ಲಿಯೂ ಅಷ್ಟದಿಕ್ಪಾಲಕರುಗಳಿಂದ ಕೂಡಿದ ತಾಂಡವ ನೃತ್ಯದಲ್ಲಿ ತೊಡಗಿರುವ ಶಿವನ ಸುಂದರ ಶಿಲ್ಪವಿದೆ. ಪ್ರತಿಯೊಬ್ಬ ದಿಕ್ಪಾಲಕನೂ ತನ್ನ ಹೆಂಡತಿಯೊಡಗೂಡಿ ತನ್ನ ವಾಹನದ ಮೇಲೆ ಕುಳಿತು, ತಾಂಡವ ಶಿವನನ್ನು ಅಭಿನಂದಿಸುತ್ತಿರುವಂತೆ ಶಿಲ್ಪಿಸಲಾಗಿದೆ. ಈ ಅಷ್ಟದಿಕ್ಪಾಲಕರುಗಳಲ್ಲಿ ಐರಾವತದ ಮೇಲೆ ಕುಳಿತಿರುವ ಇಂದ್ರ ಮತ್ತು ಮೊಸಳೆಯ ಮೇಲೆ ಕುಳಿತಿರುವ ವರುಣನ ಶಿಲ್ಪಗಳು ಬಲು ಸೊಗಸಾಗಿದೆ. ತಾಂಡವಮೂರ್ತಿ ಶಿವನಂತೂ ರತ್ನಖಚಿತವಾದ ಆಭರಣಗಳಿಂದ ಅಲಂಕೃತ ನಾಗಿದ್ದು ಸೌಂದರ್ಯರೂಪಿಯಾಗಿದ್ದಾನೆ. ಈ ರೀತಿಯ ಸುಂದರ ಶಿಲ್ಪಗಳು ಅತ್ಯಂತ ವಿರಳವೆಂದು ವಿದ್ವಾಂಸರ ಮತ.

**ಗೊಮ್ಮಟೇಶ್ವರ**

ತಲಕಾಡಿನ ಗಂಗರು ಭಾರತೀಯ ಕಲಾ ಇತಿಹಾಸ ಪ್ರಪಂಚದಲ್ಲಿ ಅಮರರಾಗಿರುವುದು ಶ್ರವಣಬೆಳಗೊಳದಲ್ಲಿರುವ ಗೊಮ್ಮಟನ ಮೂರ್ತಿ ಶಿಲ್ಪ ದಿಂದ. ಕ್ರಿ.ಶ. ೯೮೩ರಲ್ಲಿ ಪೂರೈಸಲಾದ ಈ ಶಿಲ್ಪವನ್ನು ಚಾಮುಂಡರಾಯನು ಮಾಡಿಸಿದನು. ಇಷ್ಟೊಂದು ಎತ್ತರದ ಮೂರ್ತಿಶಿಲ್ಪ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲ, ಒಟ್ಟು ೫೭ ಅಡಿ ಎತ್ತರದ ಈ ವಿಗ್ರಹ ಬೆಟ್ಟದ ಮೇಲಿರುವುದರಿಂದ ಅದರ ಭವ್ಯತೆಯು ಇನ್ನೂ ಹೆಚ್ಚಾಗಿದೆ. ದಿಗಂಬರ ರೂಪದಲ್ಲಿ ಉತ್ತರ ದಿಕ್ಕಿಗೆ ಅಭಿಮುಖವಾಗಿರುವ ಗೊಮ್ಮಟನ ವಿಶಾಲ ಎದೆ, ಸುಂದರ ಕಣ್ಣುಗಳು, ಹಾವುಗಳಿಂದ ಆವೃತವಾದ ಪಾದಗಳು, ಶರೀರದವರೆಗೂ ಬಂದಿರುವ ಲತೆಗಳು, ಗುಂಗುರು ಕೂದಲುಗಳಿಂದ ಕೂಡಿರುವ ತಲೆ, ಧ್ಯಾನಾವಸ್ಥೆ ಯಲ್ಲಿರುವ ಆ ಶಾಂತ ಮುಖ, ಜಗತ್ತಿನ ದುಃಖ, ನೋವುಗಳನ್ನು ಕಂಡು ಮುಗುಳು ನಗೆಯನ್ನು ಸೂಚಿಸುತ್ತಿರುವ ತುಟಿಗಳು—ಆದರ್ಶ ತಪಸ್ವಿಯ

ಸಂಕೇತವಾಗಿವೆ. ಎಲ್ಲದಕ್ಕಿಂತಲೂ ವಿಶೇಷವಾಗಿ ಮೆಚ್ಚುಗೆ ಗಳಿಸುವುದು ಗೊಮ್ಮಟನ ದುಃಖಪೂರಿತ ನಗು. ಶಿಲ್ಪದಲ್ಲಿ ಇಷ್ಟೊಂದು ನೈಜವಾಗಿ ಮುಖ ಭಾವವನ್ನು ಕೆತ್ತಿರುವುದು ಈ ಶಿಲ್ಪದ ಹೆಚ್ಚಳ. ಮೂರ್ತಿಶಿಲ್ಪ ಕಲಾಕ್ಷೇತ್ರ ದಲ್ಲಿ ಪ್ರಾಚೀನ ಕರ್ನಾಟಕವು ಸಾಧಿಸಿದ ಮಹತ್ ಸಾಧನೆಗಳಲ್ಲಿ ಇದೂ ಒಂದು ಎಂದು ಧೈರ್ಯವಾಗಿ ಹೇಳಬಹುದು ಎನ್ನುವ ವಿದ್ವಾಂಸರ ಮಾತಿನಲ್ಲಿ ಪೂರ್ಣ ಸತ್ಯವಿದೆ.

ಗಂಗರ ಶಿಲ್ಪಕಲೆಯನ್ನು ವಿಮರ್ಶಿಸುವಾಗ ಬೂತುಗನ ಕಾಲದ ಆತ ಕೂರು ಶಾಸನವನ್ನು ಮರೆಯುವಂತಿಲ್ಲ. ಇದರಲ್ಲಿ ಕೆತ್ತಲಾಗಿರುವ ಹಂದಿ ಹಾಗೂ ಬೇಟೆನಾಯಿಯ ಶಿಲ್ಪಗಳು ಅತ್ಯಂತ ನೈಸರ್ಗಿಕವಾಗಿವೆ. ಅದೇ ರೀತಿ ಯಲ್ಲಿ ದೊಡ್ಡಹುಂಡಿ ಶಿಲಾಶಾಸನದಲ್ಲಿ ಕೆತ್ತಲಾಗಿರುವ ಗಂಗ ನೀತಿಮಾರ್ಗನ ಮರಣದ ದೃಶ್ಯವೂ ಬಲು ಗಂಭೀರವಾಗಿದೆ. ನೀತಿಮಾರ್ಗನು ದೇಹದ ಬಳಲಿಕೆಯನ್ನು ಅನುಭವಿಸುತ್ತ ದಿಂಬಿನ ಆಶ್ರಯ ಪಡೆಯುತ್ತಿರುವುದು. ಈ ದುಃಖವನ್ನು ತಾಳಲಾರದೆ ದುಃಖಿಸುತ್ತಿರುವ ಸತ್ಯವಾಕ್ಯಶಿಲ್ಪ ; ಮನೆಯ ಆಳು ಅಗರಯ್ಯನು ಒಡೆಯನೊಡನೆ ಪ್ರಾಣ ನೀಗುವ ಅವಕಾಶ ಸಿಕ್ಕಿದುದ ಕ್ಕಾಗಿ ಸಂತೋಷಿಸುತ್ತಿರುವುದು—ಎಲ್ಲವೂ ಹೃದಯಂಗಮವಾಗಿ ಶಿಲ್ಪಿತ ವಾಗಿವೆ.

## ಕಂಚಿನ ವಿಗ್ರಹಗಳು

ಗಂಗರು ಕಂಚಿನ ವಿಗ್ರಹಗಳನ್ನು ಮಾಡುವ ಕಲೆಯಲ್ಲಿಯೂ ಸಾಕಷ್ಟು ಸಿದ್ಧಿಯನ್ನು ಸಾಧಿಸಿದ್ದರು. ಶ್ರವಣಬೆಳಗೊಳದ ಮಠದಲ್ಲಿರುವ ಅನೇಕ ಕಂಚಿನ ವಿಗ್ರಹಗಳು ಗಂಗರ ಕಾಲಕ್ಕೇ ಸೇರುತ್ತವೆ. ಅವುಗಳ ಪೀಠದ ಮೇಲೆ ಶಾಸನವಿರುವುದರಿಂದ ಅವು ಗಂಗರ ಕಾಲದವೆಂದು ತೀರ್ಮಾನಿಸಬಹುದು. ನಿಂತಿರುವ ಜಿನವಿಗ್ರಹದ ಮೇಲೆ ಕೆತ್ತಿರುವ ಗಂಗರಾಜ ಎರಡನೆಯ ಮಾರ ಸಿಂಹನ ಶಾಸನದಲ್ಲಿ ಕುಂದಣಸೋಮಿದೇವಿಯ ಪ್ರಶಂಸೆಗಳಿವೆ. ಇದು ಶ್ರವಣಬೆಳಗೊಳದಲ್ಲಿದೆ. ಒಟ್ಟಿನಲ್ಲಿ ತಲಕಾಡಿನ ಗಂಗರು ವಾಸ್ತುಶಿಲ್ಪ ಕಲೆ ಗಳಲ್ಲಿ ವಿಶೇಷ ಪ್ರಗತಿಯನ್ನು ಸಾಧಿಸಿ, ಗೊಮ್ಮಟೇಶ್ವರ ವಿಗ್ರಹದಿಂದ, ಕರ್ನಾಟಕಕ್ಕೆ ಜಗತ್ತಿನಾದ್ಯಂತ ಕೀರ್ತಿಯನ್ನು ತಂದುಕೊಟ್ಟು, ತಾವೂ ಅಮರ ರಾದರು.

# ರಾಷ್ಟ್ರಕೂಟರ ವಾಸ್ತುಶಿಲ್ಪ

ಬಾದಾಮಿ ಚಾಲುಕ್ಯರ ಅನಂತರ ಪ್ರಸಿದ್ಧಿಗೆ ಬಂದವರು ರಾಷ್ಟ್ರಕೂಟರು. ಇವರು ಬಾದಾಮಿ ಚಾಲುಕ್ಯರ ಪರಂಪರೆಯನ್ನೇ ವಿಶೇಷವಾಗಿ ಅನುಸರಿಸಿದರೂ, ಗುಹಾದೇವಾಲಯಗಳ ಕಡೆ ಹೆಚ್ಚು ಗಮನವಿತ್ತರು. ಎಲ್ಲೋರ, ಎಲಿಫೆಂಟಾ, ಮಂಡಪೇಶ್ವರ ಮುಂತಾದ ಕಡೆಗಳಲ್ಲಿ ರಾಷ್ಟ್ರಕೂಟರು ಗುಹಾಲಯಗಳನ್ನು ನಿರ್ಮಿಸಿದರು. ಇವು ಈಗಿನ ಕರ್ನಾಟಕದ ಗಡಿಯೊಳಗೆ ಇಲ್ಲವಾದರೂ, ಕರ್ನಾಟಕದ ರಾಜರುಗಳಾದ ರಾಷ್ಟ್ರಕೂಟರು ಕಲಾಪ್ರಪಂಚಕ್ಕೆ ನೀಡಿದ ಕೊಡುಗೆಗಳಾಗಿವೆ ಎನ್ನುವುದರಲ್ಲಿ ಸಂಶಯವಿಲ್ಲ. ಎಲ್ಲೋರ, ಎಲಿಫೆಂಟಾಗಳಂತೂ ಜಗದ್ವಿಖ್ಯಾತ ವಾಸ್ತುಕೃತಿಗಳ ಕ್ಷೇತ್ರಗಳಾಗಿವೆ. ಎಲ್ಲೋರದ ತೀನ್‌ತಾಲ್ ಮತ್ತು ವಿಶ್ವಕರ್ಮ ಗುಹಾಲಯಗಳು ಬೌದ್ಧಧರ್ಮಕ್ಕೆ ಸೇರಿದವು. ಎಲ್ಲೋರದಲ್ಲಿರುವ ಕೈಲಾಸ ದೇವಾಲಯವೊಂದೇ ರಾಷ್ಟ್ರಕೂಟರನ್ನು ಕಲಾಪ್ರಪಂಚದಲ್ಲಿ ಅಮರರನ್ನಾಗಿ ಮಾಡಿದೆ. ಇದನ್ನು ನಿರ್ಮಿಸಿದ ಮೊದಲನೆಯ ಕೃಷ್ಣನಿಗೆ ಭಾರತೀಯ ವಾಸ್ತುಶಿಲ್ಪ ಚರಿತ್ರೆಯಲ್ಲಿ ಒಂದು ವಿಶಿಷ್ಟ ಸ್ಥಾನ ಗಳಿಸಿಕೊಟ್ಟಿದೆ. ಅಖಂಡವಾದ ಕಲ್ಲುಗುಡ್ಡವನ್ನೇ ಕತ್ತರಿಸಿ ಒಂದೇ ಒಂದು ಬಂಡೆಯಲ್ಲಿ ನಿರ್ಮಿಸಲಾಗಿರುವ ಕೈಲಾಸ ದೇವಾಲಯವು ಸಮಕಾಲೀನ ಶಾಸನವೊಂದು ಹೇಳುವಂತೆ ಮಾನವರಿಗೆ ಅಸಾಧ್ಯವಾದ ಈ ಕಾರ್ಯವು ದೈವಶಿಲ್ಪಗಳಿಂದ ಮಾತ್ರ ಸಾಧ್ಯ. ಮುನ್ನೂರು ಅಡಿ ಉದ್ದ ಮತ್ತು ನೂರೆಪ್ಪತ್ತೈದು ಅಡಿ ಅಗಲದ ಅಂಗಳದಲ್ಲಿ ನೂರು ಅಡಿ ಎತ್ತರದ ಈ ಶಿವದೇವಾಲಯದಲ್ಲಿ ಗರ್ಭಗೃಹ, ನಂದಿಮಂಟಪ, ಮುಖಮಂಟಪ ಎಲ್ಲವೂ ಇವೆ. ಇಲ್ಲಿನ ಶಿಲ್ಪಗಳೂ ಬಲು ಆಕರ್ಷಕವಾಗಿವೆ. ರಾವಣನು ಕೈಲಾಸ ಪರ್ವತವನ್ನು ಎತ್ತುತ್ತಿರುವ ಶಿಲ್ಪ ಇಲ್ಲಿ ಎರಡು ಸಾರಿ ಶಿಲ್ಪಿತವಾಗಿದೆ. ಗಜಾಸುರ ಸಂಹಾರ, ತ್ರಿಪುರಾಂತಕ, ನಟರಾಜ, ಶಿವ ಪಾರ್ವತೀ ಕಲ್ಯಾಣ ಮುಂತಾದ ಶಿಲ್ಪ ಫಲಕಗಳು ಬಲು ಸುಂದರವಾಗಿವೆ. ಮುಂಬಯಿಗೆ ಸಮೀಪದಲ್ಲಿರುವ ಎಲಿಫೆಂಟಾ ದ್ವೀಪದಲ್ಲಿರುವ ತ್ರಿಮೂರ್ತಿಯ ಗುಹಾಲಯವು ಶಿಲ್ಪಗಳಿಗೆ ವಿಶೇಷ ಖ್ಯಾತಿ ಪಡೆದಿದೆ. ಬೃಹದಾಕಾರದ ಶಿವನ ಮೂರು ಮುಖಗಳ ಈ ಶಿಲ್ಪದಲ್ಲಿ ನೈಜಸ್ವರೂಪಗಳು ಎದ್ದು ಎದ್ದು ಕಾಣುತ್ತವೆ. ಇಲ್ಲಿರುವ ಇತರ ಶಿಲ್ಪಗಳಲ್ಲಿ ಗಜಸಂಹಾರಮೂರ್ತಿ, ಅರ್ಧನಾರೀಶ್ವರ, ಗಿರಿಜಾಕಲ್ಯಾಣ, ರಾವಣನು ಕೈಲಾಸವನು ಎತ್ತುತ್ತಿರುವುದು ಮುಂತಾದವು



ರಾಷ್ಟ್ರಕೂಟ ಒಂದನೆಯ ಕೃಷ್ಣನು ಕಟ್ಟಿಸಿದ ಎಲ್ಲೋರದ ಕೈಲಾಸನಾಥ ದೇವಾಲಯ

ವರ್ಣನೆಗೂ ಸಿಕ್ಕದಂತಹ ಸೌಂದರ್ಯ ಹೊಂದಿದೆ. ಭಾರತೀಯ ಶಿಲ್ಪದ ಇತಿಹಾಸದಲ್ಲೇ ಇಷ್ಟೊಂದು ಸುಂದರ ಶಿಲ್ಪಗಳನ್ನು ಇನ್ನೆಲ್ಲೂ ಕಾಣಲಾಗದು.

ರಾಷ್ಟ್ರಕೂಟರ ಪತನದ ಸಮಯದಲ್ಲಿ ಕರ್ನಾಟಕನ್ನು ಕಲ್ಯಾಣದ ಚಾಲುಕ್ಯರು. ದೋರಸಮುದ್ರದ ಹೊಯ್ಸಳರು ಮತ್ತು ದೇವಗಿರಿಯ ಸೇವುಣರು ತಮ್ಮಲ್ಲೇ ಹಂಚಿಕೊಂಡು ವಿಶಿಷ್ಟರೀತಿಯ ವಾಸ್ತುಶಿಲ್ಪ ಕಲೆಗಳಿಗೆ ಅವಕಾಶ ಮಾಡಿಕೊಟ್ಟರು. ಕಲ್ಯಾಣದ ಚಾಲುಕ್ಯರು ತಮ್ಮ ವಂಶಸ್ಥರೇ ಆದ ಬಾದಾಮಿ ಚಾಲುಕ್ಯರು ಹಾಕಿದ ಮೇಲ್ಪಂಕ್ತಿಯನ್ನೇ ಅನುಸರಿಸಿ ಹತ್ತಾರು ಸುಂದರ ದೇವಾಲಯಗಳನ್ನು ನಿರ್ಮಿಸಿ ಖ್ಯಾತರಾಗಿದ್ದಾರೆ. ಇವರು ವಿಶೇಷವಾಗಿ ವೇಸರ ಶೈಲಿಯ ದೇವಾಲಯಗಳನ್ನೇ ನಿರ್ಮಿಸಿದರು. ಕಗ್ಗಲ್ಲಿನ ಜೊತೆಗೆ ಸ್ವಲ್ಪ ಸ್ವಲ್ಪವಾಗಿ ನುಣುಪಾದ ಕರಿಯ ಕಲ್ಲಿನ ಬಳಕೆಯನ್ನು ಪ್ರಾರಂಭಿಸಿದರು. ಈ ಕಾಲಕ್ಕೆ ಗುಹಾದೇವಾಲಯದ ರಚನೆಯ ಸಂಪ್ರದಾಯ ಪೂರ್ಣವಾಗಿ ನಿಂತುಹೋಯಿತು. ದೇವಾಲಯಗಳ ಬೃಹತ್ತಿಗಿಂತಲೂ, ಅಲಂಕರಣಕ್ಕೆ ಹೆಚ್ಚು ಗಮನಕೊಡುವ ಪ್ರವೃತ್ತಿ ಇವರ ಕಾಲದಲ್ಲಿ ಪ್ರಾರಂಭವಾಯಿತು. ಕರಿಯಕಲ್ಲಿನ ಚರಕಿಯಂತ್ರದ ಮೇಲೆ ತಿರುಗಿಸಲಾದ ಹೊಳಪುಳ್ಳ ಕಂಬಗಳ ಉಪಯೋಗವೂ ಇವರ ಕಾಲದಲ್ಲೇ ಪ್ರಾರಂಭವಾದದ್ದು. ಇವರ ದೇವಾಲಯಗಳು ವಾಸ್ತುಶಾಸ್ತ್ರಕ್ಕೆ ತಕ್ಕಂತೆ ಚತುರಸ್ರಾಕಾರದಲ್ಲಿ ಕಟ್ಟಲ್ಪಟ್ಟವು. ಸುಂದರ ಶಿಲ್ಪಗಳಿಂದ ಕೂಡಿದ ನಾಜೂಕಿನ ಬಾಗಿಲುವಾಡಗಳು ಇವರ ಕಾಲದಲ್ಲಿ ವಿಶೇಷವಾದವು.

## ಕಲ್ಯಾಣ ಚಾಲುಕ್ಯ ವಾಸ್ತುಶಿಲ್ಪ

ಕಲ್ಯಾಣ ಚಾಲುಕ್ಯ ವಾಸ್ತುಶಿಲ್ಪದ ಪ್ರಾರಂಭವನ್ನು ಕುಕ್ಕನೂರಿಲ್ಲಿರುವ ನವಲಿಂಗ ಮತ್ತು ಕಲ್ಲೇಶ್ವರ ದೇವಾಲಯಗಳಲ್ಲಿ ಕಾಣುತ್ತೇವೆ. ಇಲ್ಲಿ ಇನ್ನೂ ಕರಿಯಕಲ್ಲಿನ ಬಳಕೆ ಕಾಣುವುದಿಲ್ಲ. ಅಲಂಕಾರವೂ ವಿಶೇಷವಾಗಿಲ್ಲ. ಮುಂದಿನ ಬೆಳವಣಿಗೆಯನ್ನು ಲಕ್ಕುಂಡಿಯ ಜೈನ ದೇವಾಲಯದಲ್ಲಿ ಕಾಣಬಹುದು. ಇಲ್ಲಿ ಕರಿಯಕಲ್ಲಿನ ಬಳಕೆಯ ಪ್ರಾರಂಭ, ಗೋಡೆಗಳ ಮೇಲಿನ ಅಲಂಕರಣ, ಎತ್ತರವಾದ ಶಿಖರ, ನಾಜೂಕಿನ ಕೆತ್ತನೆಗಳನ್ನು ಕಾಣುತ್ತೇವೆ. ಚೌಡದಾನಪುರದ ಮುಕ್ತೇಶ್ವರ, ಹಾವೇರಿಯ ಸಿದ್ಧೇಶ್ವರ, ಹರಳಹಳ್ಳಿಯ ಸೋಮೇಶ್ವರ ದೇವಾಲಯಗಳಲ್ಲಿ ಮುಂದಿನ ಹಂತ ಕಾಣಬರುತ್ತದೆ. ಕಲ್ಯಾಣ

ಚಾಲುಕ್ಯ ಶೈಲಿಯ ಪರಾಕಾಷ್ಠತೆಯನ್ನು ನಾವು ಕಾಣುವುದು ಲಕ್ಕುಂಡಿಯ ಕಾಶಿ ವಿಶ್ವೇಶ್ವರ, ಕುರುವತ್ತಿಯ ಮಲ್ಲಿಕಾರ್ಜುನ, ಇಟ್ಟಗಿಯ ಮಹಾದೇವ, ಬಳ್ಳಿಗಾವೆಯ ತ್ರಿಪುರಾಂತಕ ಮುಂತಾದ ದೇಗುಲಗಳಲ್ಲಿ. ಕಾಶಿ ವಿಶ್ವೇಶ್ವರ ದೇವಾಲಯದ ಬಾಗಿಲುವಾಡ ತೋರಣಗಳು, ಲತೆಗಳು ಮುಂತಾದ ಅಲಂಕಾರಗಳಿಂದ ಕೂಡಿದೆ. ಇಟ್ಟಗಿಯಲ್ಲಿರುವ ಮಹಾದೇವ ದೇವಾಲಯ ಈ ಶೈಲಿಯಲ್ಲಿ ನಯನಾಜೂಕಿನ ಶಿಲ್ಪಕ್ಕೆ ಹೆಸರಾಗಿದೆ. ಹೊಯ್ಸಳ ದೇವಾಲಯವೋ ಎನ್ನುವ ಭ್ರಾಂತಿ ತರುತ್ತವೆ ಈ ದೇವಾಲಯದ ಶಿಲ್ಪಗಳು. ೧೧೧೨ರಲ್ಲಿ ಆರನೆಯ ವಿಕ್ರಮಾದಿತ್ಯನ ದಂಡನಾಯಕನಾದ ಮಹಾದೇವನು ಈ ದೇವಾಲಯವನ್ನು ನಿರ್ಮಿಸಿದನು. ಆ ಕಾಲದ ಶಾಸನವೊಂದು ಹೇಳುವಂತೆ ಇದು ದೇವಾಲಯಗಳ ಚಕ್ರವರ್ತಿ. ಗರ್ಭಗುಡಿ, ಅಂತರಾಳ, ನವರಂಗ, ಮುಂಟಪಗಳಿರುವ ಈ ದೇವಾಲಯದಲ್ಲಿ ಕನ್ನಡಿಯಂತೆ ಹೊಳೆಯುವ ನುಣುಪಾದ ಕಂಬಗಳು, ಕುಸುರಿ ಕೆಲಸವನ್ನು ಹೊಂದಿದ ಬಾಗಿಲುವಾಡಗಳು, ಸುಂದರವಾದ ಶಿಖರಗಳಿವೆ. ಎಲ್ಲೆಲ್ಲೂ ಸುಂದರ ಶಿಲ್ಪಗಳು. ಕುರುವತ್ತಿಯಲ್ಲಿರುವ ಮಲ್ಲಿಕಾರ್ಜುನ ದೇವಾಲಯವೂ ಇಷ್ಟೇ ಸುಂದರವಾಗಿದ್ದರೂ ಅಲ್ಲಿರುವ ಶಿಲಾಬಾಲಿಕೆಯರ ಶಿಲ್ಪಗಳಿಂದ ಹೆಚ್ಚು ಮನಮೋಹಕವಾಗಿದೆ. ಗದುಗಿನಲ್ಲಿರುವ ತ್ರಿಕೂಟೇಶ್ವರ, ಸರಸ್ವತಿ ಮತ್ತು ಸೋಮೇಶ್ವರ ದೇವಾಲಯಗಳೂ ಉಚ್ಛ್ರಾಯ ಕಾಲದ ಸುಂದರ ವಾಸ್ತುಕೃತಿಗಳು. ದಂಬಳದಲ್ಲಿರುವ ದೊಡ್ಡ ಬಸಪ್ಪ ದೇವಾಲಯ ಚಾಲುಕ್ಯ ಶೈಲಿಗೆ ಅಪವಾದವೆನಿಸಿದೆ. ಏಕೆಂದರೆ ಇಲ್ಲಿ ನಕ್ಷತ್ರಾಕಾರದ ತಲವಿನ್ಯಾಸವನ್ನು ಕಾಣುತ್ತೇವೆ. ಇದೇ ರೀತಿಯ ತಲವಿನ್ಯಾಸವು ಗದುಗಿನ ಸೋಮೇಶ್ವರ ದೇವಾಲಯದಲ್ಲಿಯೂ ಇದೆ. ಇದೇ ಮುಂದೆ ಹೊಯ್ಸಳರ ಕಾಲದಲ್ಲಿ ಅವರ ವಾಸ್ತು ರಚನೆಯ ಮುಖ್ಯ ಲಕ್ಷಣವಾಯಿತು. ಕಲ್ಯಾಣದ ಚಾಲುಕ್ಯರ ಇತರ ದೇವಾಲಯಗಳು ಹಾವೇರಿ, ಹಾನಗಲ್, ಬಂಕಾಪುರ, ಬನವಾಸಿ, ದೇಗಂದೆ, ಬಳ್ಳಿಗಾವೆ, ಹೂವಿನ ಹಡಗಲಿ, ರಟ್ಟಿಹಳ್ಳಿ, ಹರಿಹರ, ಜಲಸಂಗ್ವಿ ಮುಂತಾದ ಕಡೆಗಳಲ್ಲಿವೆ.

ಕಲ್ಯಾಣದ ಚಾಲುಕ್ಯರ ದೇವಾಲಯಗಳಲ್ಲಿ ಹಿತಮಿತವಾದ ಶಿಲ್ಪಗಳಿರುತ್ತವೆ. ತುಂಬ ಕಡಿಮೆಯಿಲ್ಲ; ತುಂಬ ಹೆಚ್ಚಿಲ್ಲ; ಎಷ್ಟು ಹಿತವೋ ಅಷ್ಟು ಮಾತ್ರ. ಅವುಗಳಲ್ಲಿ ದೇವತಾ ಮೂರ್ತಿಗಳೇ ವಿಶೇಷ. ಬ್ರಹ್ಮ, ಸರಸ್ವತಿ, ಸೂರ್ಯ, ಶಿವ, ಪಾರ್ವತಿ ಗಣೇಶ ಮುಂತಾದವು ಬಹು ಸಾಮಾನ್ಯ. ಚಾಲು



ಶಾಸನ ಸುಂದರಿ
(ಮಹಾದೇವಿ ದೇವಾಲಯ, ಜಲಸಂಗವಿ)

ಕ್ಯರ ಶಿಲ್ಪವನ್ನು ಕುರಿತು ತಿಳಿಯುವಾಗ ಜಲಸಂಗ್ವಿಯ ಶಾಸನ ಸುಂದರಿಯನ್ನು ಮರೆಯುವಂತಿಲ್ಲ. ಈ ಶಿಲ್ಪದಲ್ಲಿ ಸುಂದರಿಯೊಬ್ಬಳು ಆರನೆಯ ವಿಕ್ರಮಾದಿತ್ಯನ ಪರಾಕ್ರಮವನ್ನು ಹೊಗಳಿ ಶಾಸನ ಒಂದನ್ನು ಬರೆಯುತ್ತಿರುವಂತೆ ಶಿಲ್ಪಿತಳಾಗಿದ್ದಾಳೆ. ಆಕೆಯ ನಿಂತಿರುವ ರೀತಿ, ಸುಲಲಿತವಾದ ಭಂಗಿ, ಬಹಳ ಮೋಹಕವಾದುದು. ಬಳ್ಳಿಗಾವೆಯ ತ್ರಿಪುರಾಂತಕ ದೇವಾಲಯದಲ್ಲಿರುವ ಆಮೆ ಮತ್ತು ಹಂಸ, ಟಗರು ಮತ್ತು ನರಿ, ಮೊಸಳೆ ಮತ್ತು ಕೋತಿಯ ಪಂಚತಂತ್ರದಲ್ಲಿರುವ ಕಥೆಗಳು ಬಲು ಸಹಜವಾಗಿ ಕೆತ್ತಲ್ಪಟ್ಟಿವೆ. ಈ ದೇವಾಲಯದ ಜಾಲಂಧ್ರಗಳು ಬಹಳ ಕಲಾತ್ಮಕವಾಗಿವೆ. ಇವು ಸೂಕ್ಷ್ಮ ಕೆತ್ತನೆಗೂ ಹೆಸರುವಾಸಿಯಾಗಿವೆ ಬಲು ವಿರಳವಾದರೂ ಕಲ್ಯಾಣ ಚಾಲುಕ್ಯರ ಕಾಲದ ಕೆಲವು ಕಂಚಿನ ವಿಗ್ರಹಗಳು ದೊರಕಿವೆ. ಅವು ವಿಶೇಷವಾಗಿ ಜೈನ ಧರ್ಮಕ್ಕೆ ಸೇರಿದವು.



## ಹೊಯ್ಸಳ ವಾಸ್ತುಶಿಲ್ಪ

ಹೊಯ್ಸಳರ ಕಾಲವನ್ನು ಕರ್ನಾಟಕ ವಾಸ್ತುಶಿಲ್ಪ ಕಲೆಗಳ ಸುವರ್ಣ ಯುಗ ಎಂದರೆ ಅತಿಶಯೋಕ್ತಿಯಲ್ಲ. ಇವರ ಕಾಲದಲ್ಲಿ ನೂರಾರು ಸುಂದರ ದೇವಾಲಯಗಳು ಕಟ್ಟಲ್ಪಟ್ಟು ವಾಸ್ತುಶಿಲ್ಪಕ್ಕೆ ಒಂದು ನವಚೇತನ ಬಂದಂತಾಯಿತು. ಶೈವ, ವೈಷ್ಣವ ಮತ್ತು ಜೈನಧರ್ಮದ ವಾಸ್ತುಶಿಲ್ಪಕ್ಕೆ ಒಂದು ನವ ಚೇತನ ಬಂದಂತಾಯಿತು. ಶೈವ, ವೈಷ್ಣವ ಮತ್ತು ಜೈನಧರ್ಮದ ವಾಸ್ತು ಕೃತಿಗಳು ಸೌಂದರ್ಯದಿಂದ ತಲೆ ಎತ್ತಿ ಎಲ್ಲೆಲ್ಲೂ ತಮ್ಮ ಸೊಬಗನ್ನು ಬೀರ ತೊಡಗಿದವು. ಇಂದಿಗೂ ಕರ್ನಾಟಕವೆಂದರೆ ಬೇಲೂರು, ಹಳೇಬೀಡುಗಳ ದೇವಾಲಯಗಳು ನಮ್ಮ ಸ್ಮೃತಿಪಟಲಕ್ಕೆ ಬರುತ್ತವೆ. ಹೊಯ್ಸಳರು ಕಲ್ಯಾಣದ ಚಾಲುಕ್ಯರ ಪರಂಪರೆಯನ್ನೇ ಮುಂದುವರಿಸಿದ್ದರೂ ತಮ್ಮದೇ ಆದ ಕೆಲವು ಸ್ವಂತಿಕೆಗಳಿಂದ, ಹೊಸಶೈಲಿಯನ್ನೇ ನಿರ್ಮಿಸಿದರು.

ಸಾಮಾನ್ಯವಾಗಿ ಹೊಯ್ಸಳ ದೇವಾಲಯಗಳು ನುಣುಪಾದ ಕರಿಯ ಕಲ್ಲಿ (ಬಳಪದಕಲ್ಲು)ನಿಂದ ನಿರ್ಮಿತವಾಗಿವೆ. ಇದು ಬಹಳ ಮೃದುವಾದ ಕಲ್ಲಾದುದರಿಂದ ಅಕ್ಕಸಾಲಿಯ ಚಿನ್ನಬೆಳ್ಳಿಯಲ್ಲಿ ಮಾತ್ರ ಸಾಧ್ಯವಾದ, ಕೆತ್ತನೆಯ ಕೆಲಸವು ಹೊಯ್ಸಳ ಶಿಲ್ಪಿಗಳಿಗೆ ಸುಲಭ ಸಾಧ್ಯವಾಯಿತು. ಆದುದರಿಂದ ಅತಿ ಸೂಕ್ಷ್ಮವಾದ ಕೆತ್ತನೆ ಕೆಲಸವು ದೇವಾಲಯದ ಎಲ್ಲ ಭಾಗಗಳನ್ನೂ ಅಲಂಕಾರಗೊಳಿಸಿತು. ಹೊಯ್ಸಳರ ದೇವಾಲಯಗಳು ಎತ್ತರದಲ್ಲಿ ಕಡಿಮೆ

ಯಾದುದರಿಂದ, ಅವುಗಳನ್ನು ಆರೇಟು ಅಡಿಗಳ ಜಗತಿಯ ಮೇಲೆ ಕಟ್ಟಲಾಯಿತು. ಈ ಜಗತಿಯೂ ತಲವಿನ್ಯಾಸದಲ್ಲಿ ನಕ್ಷತ್ರಾಕಾರವನ್ನು ಹೊಂದಿ, ದೇವಾಲಯದ ಸೊಬಗನ್ನು ಹೆಚ್ಚಿಸಲು ಅನುಕೂಲವಾಯಿತು. ದೇವಾಲಯದ ಕೆಳಗಿನಿಂದ ಸುಮಾರು ೫-೬ ಅಡಿಗಳಷ್ಟು ಎತ್ತರದವರೆಗೆ ಒಂದರ ಮೇಲೆ ಒಂದರಂತೆ ಶಿಲ್ಪಗಳ ಸಾಲುಗಳಿರುತ್ತವೆ. ಹೊಯ್ಸಳ ದೇವಾಲಯಗಳಿಗೆ ಒಳಗಿನ ಪ್ರದಕ್ಷಿಣಾಪಥವಿಲ್ಲದಿರುವುದರಿಂದ, ಜಗತಿಯ ಸುತ್ತಲೂ ಈ ಶಿಲ್ಪಗಳನ್ನು ನೋಡಲು ಮತ್ತು ದೇವಾಲಯದ ಪ್ರದಕ್ಷಿಣೆ ಮಾಡಲು ಸಾಕಷ್ಟು ಜಾಗವಿರುತ್ತದೆ. ಹೊಯ್ಸಳ ದೇವಾಲಯಗಳ ಕಂಬಗಳು ಚರಕಿ ಯಂತ್ರದ ಮೇಲೆ ತಯಾರಿಸಿದವುಗಳಾಗಿದ್ದು ೧೬-೩೨ ಮೂಲೆಗಳುಳ್ಳದ್ದಾಗಿ ಕೆಲವು ವರ್ತುಲಾಕಾರವಾಗಿಯೂ ಮತ್ತೆ ಕೆಲವು ಘಂಟೆಯ ಆಕೃತಿಯಲ್ಲಿಯೂ ಕೆತ್ತಲ್ಪಟ್ಟಿವೆ. ಕೆಲವು ಕಂಬಗಳಂತೂ ಕನ್ನಡಿಯಂತೆ ಹೊಳಪುಳ್ಳದ್ದಾಗಿವೆ. ಇವುಗಳಿಗೆ ಓರೆಯಾಗಿ ಮದನಿಕೆ ವಿಗ್ರಹಗಳು ಸುಂದರ ಭಂಗಿಯಲ್ಲಿರುವುದು ಅನೇಕ ಹೊಯ್ಸಳ ದೇಗುಲಗಳ ವೈಶಿಷ್ಟ್ಯ. ಹೊಯ್ಸಳ ದೇವಾಲಯಗಳಲ್ಲಿ ಒಂದರಿಂದ ಐದರವರೆಗೆ ಶಿಖರಗಳಿರುತ್ತವೆ. ಈ ರೀತಿಯ ದೇವಾಲಯಗಳನ್ನು ಏಕಕೂಟ, ದ್ವಿಕೂಟ, ತ್ರಿಕೂಟ ಇತ್ಯಾದಿಯಾಗಿ ಕರೆಯುತ್ತೇವೆ. ಹೊಯ್ಸಳ ಶೈಲಿಯ ಮತ್ತೊಂದು ಹೆಚ್ಚಳವೆಂದರೆ ಸುಂದರ ಭುವನೇಶ್ವರಿಗಳು. ಮಧ್ಯದಲ್ಲಿ ಇಳಿಬಿಟ್ಟಿರುವ ಹೂವು, ಅದರ ಸುತ್ತಲೂ ಗಣಗಳು ಇಲ್ಲವೇ ಇತರ ಶಿಲ್ಪಗಳು, ಇವುಗಳಿಂದ ಕೂಡಿದ್ದು ಬಹಳ ನಾಜೂಕಾಗಿರುತ್ತವೆ. ಇವುಗಳಲ್ಲಿ ಕಾಣಬರುವ ಕೈಚಳಕ ಮೆಚ್ಚುವಂತಹುದು. ಹೊಯ್ಸಳ ದೇವಾಲಯಗಳಲ್ಲಿ ಶಿಲ್ಪಗಳ ಕೆಳಗೆ, ಅವುಗಳನ್ನು ಕೆತ್ತಿದ ಶಿಲ್ಪಿಗಳ ಪೂರ್ಣ ಹೆಸರು, ಇಲ್ಲವೆ ಹೆಸರಿನ ಮೊದಲಕ್ಷರ ಇರುವುದು ಮತ್ತೊಂದು ವೈಶಿಷ್ಟ್ಯ. ಮಲಿತಮ್ಮ, ಮಸಣಿತಮ್ಮ, ಚೌಡಯ್ಯ, ಜಕ್ಕಣ, ಚಾವಣ, ದಾಸೋಜ, ಮಣಿಯೋಜ ಮುಂತಾದ ಶ್ರೇಷ್ಠ ಶಿಲ್ಪಿಗಳು ಹೊಯ್ಸಳ ದೇವಾಲಯಗಳಲ್ಲಿ ಕೆಲಸಮಾಡಿದರೆಂದು ತಿಳಿಯುತ್ತದೆ. ಹೊಯ್ಸಳ ದೇವಾಲಯಗಳಲ್ಲಿ ವಾಸ್ತುಶಿಲ್ಪ ಯಾವುದು ಶಿಲ್ಪ ಯಾವುದು ಎಂದು ಬೇರ್ಪಡಿಸುವುದು ಕಷ್ಟ. ಎಲ್ಲೆಲ್ಲಿಯೂ ಶಿಲ್ಪಗಳು ಸ್ವಲ್ಪ ಹೆಚ್ಚು ಎನ್ನುವಷ್ಟರಮಟ್ಟಿಗೆ ದೇವಾಲಯದ ಎಲ್ಲೆಡೆಯಲ್ಲಿಯೂ ಶಿಲ್ಪಗಳಿರುತ್ತವೆ. ದೇವಾಲಯವನ್ನೆಲ್ಲ ಹುಡುಕಿದರೂ ಅಲಂಕಾರವಿಲ್ಲದ, ಕೆತ್ತನೆಯ ಕೆಲಸವಿಲ್ಲದ ಗೋಡೆಯಿಲ್ಲ. ಅದು ಗೋಡೆ

ಯಿರಲಿ, ಶಿಖರವಿರಲಿ, ಕಿಟಕಿಯಿರಲಿ, ಬಾಗಿಲಾಗಿರಲಿ, ಅವೆಲ್ಲವೂ ಸೂಕ್ಷ್ಮ ಶಿಲ್ಪದಿಂದ ಕೂಡಿರಲೇಬೇಕು ; ಆಗಲೇ ಶಿಲ್ಪಿಗೆ ತೃಪ್ತಿ. ಇದು ಹೊಯ್ಸಳ ರೂವಾರಿಗಳು ಹಾಕಿಕೊಂಡ ಸಂಪ್ರದಾಯ. ಅದಕ್ಕನುಗುಣವಾಗಿ ಅವರು ನೂರಾರು ದೇಗುಲಗಳನ್ನು ನಿರ್ಮಿಸಿದರು.

ನೂರಾರು ಹೊಯ್ಸಳ ದೇವಾಲಯಗಳಿದ್ದರೂ ವಿಶೇಷ ಖ್ಯಾತಿಯನ್ನು ಪಡೆದವು-ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದ ದೇವಾಲಯಗಳು. ವಿಷ್ಣುವರ್ಧನನು ೧೧೧೭ರಲ್ಲಿ ತನ್ನ ವಿಜಯದ ಜ್ಞಾಪಕಾರ್ಥವಾಗಿ ಬೇಲೂರಿನಲ್ಲಿ ವಿಜಯನಾರಾಯಣ ದೇವಾಲಯವನ್ನು ಕಟ್ಟಿಸಿದನು. ಒಂದೇ ಗರ್ಭಗುಡಿಯಿರುವ ಈ ದೇವಾಲಯದ ಶಿಖರ ಹಾಳಾಗಿದ್ದರೂ, ಶಿಲ್ಪಗಳಿಂದ ಖ್ಯಾತಿಗಳಿಸಿವೆ. ಇಲ್ಲಿರುವ ಶಿಲಾಬಾಲಿಕೆಯರ ಶಿಲ್ಪಗಳು ಜಗದ್ವಿಖ್ಯಾತವಾಗಿವೆ. ಸ್ನಾನಮಾಡುತ್ತಿರುವ, ಶೃಂಗಾರಮಾಡಿಕೊಳ್ಳುತ್ತಿರುವ, ಗಿಣಿಯೊಡನೆ ಮಾತನಾಡುತ್ತಿರುವ ಮುಂತಾದ ಸುಂದರ ಶಿಲಾಬಾಲಿಕೆಯರ ವಿಗ್ರಹಗಳು ನಯನಮನೋಹರವಾಗಿದ್ದು ಯೌವನದ ಸೊಬಗನ್ನು ಸೂಚಿಸುತ್ತವೆ. ವಿಷ್ಣುವರ್ಧನನ ಕಾಲದಲ್ಲೇ ಪ್ರಾರಂಭಿಸಲ್ಪಟ್ಟು ನರಸಿಂಹನ ಕಾಲದಲ್ಲಿ ಕಟ್ಟಿ ಪೂರೈಸಲಾದ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯವು ಹೊಯ್ಸಳ ದೇವಾಲಯಗಳಲ್ಲೆಲ್ಲ ಅತ್ಯಂತ ದೊಡ್ಡದಾದದ್ದು ಮತ್ತು ಭವ್ಯವಾದದ್ದು. ಶಿಲ್ಪಗಳಿಂದ ಕಿಕ್ಕಿರಿದ ಈ ದೇವಾಲಯ ನಮ್ಮನ್ನು ಬೇರೊಂದು ಲೋಕಕ್ಕೆ ಕೊಂಡೊಯ್ಯುತ್ತದೆ ಎಂದರೆ ಆಶ್ಚರ್ಯವಲ್ಲ. ಪಾಶ್ಚಾತ್ಯ ವಿದ್ವಾಂಸರನೇಕರು ಇದನ್ನು ಸಾಕಷ್ಟು ಹೊಗಳಿದ್ದಾರೆ. ಸೋಮನಾಥಪುರದ ಮೂರು ಶಿಖರದ ತ್ರಿಕೂಟಾಚಲ ದೇವಾಲಯವನ್ನು ಅನರ್ಘ್ಯರತ್ನವೆಂದು ಅನೇಕರು ಭಾವಿಸುತ್ತಾರೆ. ೧೨೬೮ರಲ್ಲಿ ಮೂರನೆಯ ನರಸಿಂಹನ ಮಂತ್ರಿ ಸೋಮನಾಥ ದಂಡನಾಯಕನಿಂದ ನಿರ್ಮಿಸಲ್ಪಟ್ಟ ಈ ದೇವಾಲಯ ಪರಿಪೂರ್ಣ ಹೊಯ್ಸಳ ಶೈಲಿಗೆ ಉತ್ತಮ ಉದಾಹರಣೆ. ಇವುಗಳ ಜೊತೆಗೆ ನುಗ್ಗೇಹಳ್ಳಿ, ಗೋವಿಂದನಹಳ್ಳಿ, ಜಾವಗಲ್ಲು, ಹೊಸಹೊಳಲು. ಅಮೃತಾಪುರ, ಅರಸೀಕೆರೆ, ಶ್ರವಣಬೆಳಗೊಳ, ಬಸರಾಳು, ಬೂದನೂರು, ವಿಷ್ಣುಸಂತೆ—ಹೀಗೆ ನೂರಾರು ಹಳ್ಳಿಗಳಲ್ಲಿ ಕಾಣಬರುವ ಹೊಯ್ಸಳ ದೇವಾಲಯಗಳನ್ನೂ ಗಮನಿಸಬೇಕು. ಒಟ್ಟಿನಲ್ಲಿ ಹೇಳುವುದಾದರೆ ಹೊಯ್ಸಳ ವಾಸ್ತುಶಿಲ್ಪವು ಕರ್ನಾಟಕದಲ್ಲಿ ಆ ಕಲೆಗೆ ಒಂದು ಹೊಸ ಆಯಾಮವನ್ನು ತಂದು



ಪ್ರಸನ್ನ ಚೆನ್ನಕೇಶವ ದೇವಾಲಯ, ಸೋಮನಾಥಪುರ

ಕೊಟ್ಟಿತು. ಮುಂದೆಂದೂ ಕರ್ನಾಟಕದಲ್ಲಿ ಈ ರೀತಿಯ ದೇವಾಲಯಗಳು ನಿರ್ಮಾಣವಾಗಲೇ ಇಲ್ಲ.

## ಸೇವಣ ವಾಸ್ತುಶಿಲ್ಪ

ಸೇವುಣರ ವಾಸ್ತುಶಿಲ್ಪ ಕೃತಿಗಳು ವಿಶೇಷವಾಗಿ ಇಂದಿನ ಕರ್ನಾಟಕದ ಹೊರಗಡೆ ಇವೆ. ಇವರು ಕಲ್ಯಾಣದ ಚಾಲುಕ್ಯರ ದೇವಾಲಯಗಳ ಮಾದರಿಯನ್ನೇ ವಿಶೇಷವಾಗಿ ಅನುಸರಿಸಿದರು. ಆದರೆ ಇವರ ದೇವಾಲಯಗಳಲ್ಲಿ ಸೌಂದರ್ಯ ಕಡಿಮೆ. ನಾಜೂಕೂ ಕಡಿಮೆ. ದಪ್ಪ ದಪ್ಪ ಕಲ್ಲಿನ ಉಪಯೋಗ ಒರಟುತನವನ್ನು ಎತ್ತಿ ತೋರಿಸುತ್ತದೆ. ಜೊತೆಗೆ ಇವುಗಳಲ್ಲಿ ಶಿಲ್ಪವೂ ಬಲು ಕಡಿಮೆ. ಸಿನ್ನಾರ್‌ನಲ್ಲಿರುವ ಗೊಂಡೇಶ್ವರ ದೇವಾಲಯವು ಸೇವುಣರ ಶೈಲಿಗೆ ಉತ್ತಮ ಉದಾಹರಣೆ. ನಕ್ಷತ್ರಾಕಾರದ ಜಗತಿಯ ಮೇಲೆ ನಿಂತಿರುವ ಪಂಚಾಯತನ ದೇವಾಲಯ ಇದು. ಸೇವುಣರ ದೇವಾಲಯಗಳನ್ನು ಹೇಮಾಡಪಂತಿ ಶೈಲಿಯ ದೇವಾಲಯಗಳೆಂದು ಕರೆಯುವುದು ವಾಡಿಕೆ. ಸೇವುಣ ರಾಮಚಂದ್ರನ ಮಂತ್ರಿಯಾದ ಹೇಮಾದ್ರಿಯು ಈ ದೇಗುಲಗಳನ್ನು ಕಟ್ಟಲು ವಿಶೇಷ ಪ್ರೋತ್ಸಾಹ ಕೊಟ್ಟದುದರಿಂದ, ಆ ಹೆಸರು ಬಂದಿರಬಹುದೆಂದು ಊಹೆ.

## ವಿಜಯನಗರ ವಾಸ್ತುಶಿಲ್ಪ

ಸೇವುಣರ ಪತನಾನಂತರ ಕರ್ನಾಟಕವು ವಿಜಯನಗರದ ಅರಸರ ಅಧಿಪತ್ಯಕ್ಕೆ ಒಳಪಟ್ಟಿತು. ಆಗಿನ ವಿಜಯನಗರದ ಕಾಲವು ದಕ್ಷಿಣ ಭಾರತ ಇತಿಹಾಸದಲ್ಲೇ ಸುವರ್ಣಯುಗವೆಂಬುದು ಎಲ್ಲರಿಗೂ ತಿಳಿದ ವಿಷಯ. ಇದು ವಾಸ್ತುಶಿಲ್ಪಕ್ಕೂ ಅನ್ವಯಿಸುತ್ತದೆ. ವಾಸ್ತುಶಿಲ್ಪ ಕಲೆಗಳು ಈ ಕಾಲದಲ್ಲಿ ಬೃಹತ್ತು ಮತ್ತು ಮಹತ್ತು ಎರಡನ್ನೂ ಪಡೆದು ಅನೇಕ ಹೊಸ ಹೊಸ ಸಾಧನೆಗಳಿಗೆ ಕಾರಣವಾದವು. ಇವರ ಕಾಲದಲ್ಲಿ ದೇವಾಲಯದ ವಿಸ್ತೀರ್ಣ ಹೆಚ್ಚಾಯಿತು. ಕೆಲವು ಕಡೆಗಳಲ್ಲಿ ಅದೇ ಒಂದು ಸಣ್ಣ ನಗರದಂತೆ ಭಾಸವಾಗುತ್ತದೆ. ನೃತ್ಯ ಮಂಟಪ, ಸಾವಿರಕಂಬಗಳ ಮಂಟಪ, ಕಲ್ಯಾಣ ಮಂಟಪಗಳನ್ನು ದೇವಸ್ಥಾನಗಳಿಗೆ ಅಳವಡಿಸಲಾಯಿತು. ಕಂಬಗಳನ್ನು ವಿಶೇಷವಾಗಿ ಅಲಂಕರಿಸಲಾಯಿತು. ಕೆಲವು ಕಡೆಗಳಲ್ಲಿ ಕಂಬಗಳ ಜೊತೆಗೆ ಕುದುರೆ, ಯಾಳಿ ಮುಂತಾದ ಪ್ರಾಣಿಗಳ ಶಿಲ್ಪಗಳನ್ನು ಸೇರಿಸಿ ಅವು ಸುಂದರವಾಗುವಂತೆ ಮಾಡಲಾಯಿತು. ಒಂದಕ್ಕಿಂತ ಹೆಚ್ಚು ಪ್ರಾಕಾರಗಳನ್ನು ದೇವಾಲಯಕ್ಕೆ ಸೇರಿಸುವ ಪರಂಪರೆಯೂ ವಿಶೇಷ

ವಾಯಿತು. ಬಲು ಎತ್ತರವಾದ ಇಟ್ಟಿಗೆಯ ಗೋಪುರಗಳನ್ನು ಹೊರ ಮತ್ತು ಒಳ ಪ್ರಾಕಾರಗಳ, ಒಂದೆಡೆ, ಇಲ್ಲವೆ ನಾಲ್ಕೂ ಕಡೆಗಳಲ್ಲಿ ಕಟ್ಟುವುದೂ ಪ್ರಾರಂಭವಾಯಿತು.

ವಿಜಯನಗರದ ವಾಸ್ತುಶಿಲ್ಪವು ಆಂಧ್ರ, ಕರ್ನಾಟಕ, ಮತ್ತು ತಮಿಳು ನಾಡುಗಳಲ್ಲಿ ಕಾಣಬರುತ್ತದೆ. ಹಂಪೆಯು ಈ ವಾಸ್ತುಶಿಲ್ಪದ ಕೇಂದ್ರವಾಗಿ ಪರಿಣಮಿಸಿತು. ಇಲ್ಲಿಯ ಅತ್ಯಂತ ಪ್ರಾಚೀನ ದೇವಾಲಯವೆಂದರೆ ಪಂಪಾಪತಿ ಯದು. ವೇಸರ ಶೈಲಿಯನ್ನನುಸರಿಸಲಾದ ಈ ದೇವಾಲಯಕ್ಕೆ ೧೫೧೦ರಲ್ಲಿ ಕೃಷ್ಣದೇವರಾಯನು ರಂಗಮಂಟಪವನ್ನು ಸೇರಿಸಿದನು. ಹಂಪೆಯಲ್ಲಿರುವ ಮುಖ್ಯ ದೇವಾಲಯಗಳಲ್ಲಿ ವಿರೂಪಾಕ್ಷ, ಕೃಷ್ಣಸ್ವಾಮಿ, ಹಜಾರ ರಾಮ ಸ್ವಾಮಿ ಮತ್ತು ವಿಠಲಸ್ವಾಮಿಯ ದೇವಾಲಯಗಳನ್ನು ಹೆಸರಿಸಬೇಕು. ವಿಠಲಸ್ವಾಮಿಯ ದೇವಾಲಯವನ್ನು ಬಹುಕೋನಗಳುಳ್ಳ ಪಾಯದ ಮೇಲೆ ಕಟ್ಟಲಾಗಿದೆ. ಇಲ್ಲಿನ ಕಲ್ಯಾಣ ಮತ್ತು ಫಲಪೂಜಾ ಮಂಟಪಗಳು ಇಲ್ಲಿನ ವೈಶಿಷ್ಟ್ಯ. ಇಲ್ಲಿನ ಕಂಬಗಳು ಬಲು ಸುಂದರವಾಗಿದೆ. ಹಿಂಗಾಲಿನಿಂದ ಕುಪ್ಪಳಿಸಿ ಮೇಲೆದ್ದಿರುವ ಯಾಳಿಗಳ ಮೇಲೆ ಕುಳಿತಿರುವ ರಾವುತರನ್ನು ಈ ಕಂಬಗಳಲ್ಲಿ ಅಳವಡಿಸಲಾಗಿದೆ. ಕೃಷ್ಣಸ್ವಾಮಿ ದೇವಾಲಯದಲ್ಲಿಯೂ ಈ ಸುಂದರ ಕಂಬಗಳು, ಶಿಲ್ಪಗಳು ವಿಶೇಷವಾಗಿವೆ. ಹಜಾರ ರಾಮಸ್ವಾಮಿಯ ದೇವಾಲಯ ಕೃಷ್ಣದೇವರಾಯನ ದಿಗ್ವಿಜಯದ ನೆನಪಾಗಿ ಕಟ್ಟಿಸಲಾಯಿತು. ಇಲ್ಲಿನ ಹೊರಗೋಡೆಯ ಮೇಲೆ ರಾಮಾಯಣ, ಕೃಷ್ಣಲೀಲೆಗಳಿಂದ ಆಯ್ದ ಕಥೆಗಳನ್ನು ಶಿಲ್ಪಿಸಲಾಗಿದೆ. ಜೊತೆಗೆ ಇಲ್ಲಿ ಶಿಲ್ಪ ಪಟ್ಟಿಕೆಗಳಿವೆ. ಕೃಷ್ಣದೇವ ರಾಯನು ಕಟ್ಟಿಸಿದ ಮಹಾನವಮಿ ದಿಬ್ಬವೂ ಮೆಚ್ಚಿಗೆಗೆ ಪಾತ್ರವಾದ ಪೀಠ. ಅದನ್ನು ಆ ಕಾಲದ ಪೋರ್ಚುಗೀಸ್ ಪ್ರವಾಸಿ ಪಾಯಸ್ ಎನ್ನುವನು ಬಲು ಚೆನ್ನಾಗಿ ಹೊಗಳಿದ್ದಾನೆ. ಲೇಪಾಕ್ಷಿಯಲ್ಲಿರುವ ವೀರೇಶ್ವರ ದೇವಾಲಯ ೧೫೩೩ರಲ್ಲಿ ವೀರಣ್ಣನೆಂಬುವನಿಂದ ರಚಿತವಾಯಿತು. ಇಲ್ಲಿರುವ ವರ್ಣಚಿತ್ರಗಳು ವಿಜಯನಗರಕಾಲದ ಚಿತ್ರಕಲೆಗೆ ಒಳ್ಳೆಯ ಉದಾಹರಣೆ. ತಾಡಪತ್ರಿಯ ಶಿವ ದೇವಾಲಯವೂ ವಿಜಯನಗರ ಕಾಲದ್ದು. ಶ್ರೀರಂಗಂ. ಚಿದಂಬರಂ, ಕಾಂಚಿ ಮುಂತಾದ ಕಡೆಗಳಲ್ಲಿ ವಿಜಯನಗರದ ಅರಸರು ಹಿಂದಿನ ಸುಪ್ರಸಿದ್ಧ ದೇವಾಲಯಗಳಿಗೆ ಸಾವಿರಕಂಬಗಳ ಮಂಟಪಗಳನ್ನು ಸೇರಿಸಿ ಅವು ಪ್ರಸಿದ್ಧವೂ ಸುಂದರವೂ ಆಗುವಂತೆ ಮಾಡಿದರು.



ಹಂಪೆಯ ವಿರೂಪಾಕ್ಷ ದೇವಾಲಯದ ಮಹಾದ್ವಾರ ಗೋಪುರ

ವಿಜಯನಗರದ ಶಿಲ್ಪವೂ ಸಾಕಷ್ಟು ಪ್ರಸಿದ್ಧಿ ಪಡೆಯಿತು. ಸೂರ್ಯ, ಕೃಷ್ಣ, ವಿಷ್ಣುವಿನ ವಿವಿಧ ಅವತಾರಗಳು, ಶ್ರೀದೇವಿ, ಭೂದೇವಿ, ತ್ರಿವಿಕ್ರಮ, ನರ್ತಕ-ನರ್ತಕಿಯರು ಮುಂತಾದ ನೂರಾರು ಶಿಲ್ಪಗಳಿವೆ. ಇವುಗಳಲ್ಲಿ ವಿಶೇಷವಾಗಿ ಪ್ರಖ್ಯಾತವಾಗಿರುವ ಸಾಸಿವೆಕಾಳು ಮತ್ತು ಕಡಲೆಕಾಳು ಗಣಪತಿ, ಉಗ್ರನರಸಿಂಹ ವಿಗ್ರಹಗಳನ್ನು ಮರೆಯುವಂತಿಲ್ಲ. ಲೇಪಾಕ್ಷಿಯಲ್ಲಿರುವ ಏಕ ಶಿಲೆಯಲ್ಲಿ ಕಡೆದಿರುವ ೨೮ ಅಡಿ ಉದ್ದದ ನಂದಿಯ ಶಿಲ್ಪವೂ ಗಮನಾರ್ಹ ವಾದುದು. ಶೃಂಗೇರಿಯಲ್ಲಿರುವ ವಿದ್ಯಾಶಂಕರ ದೇವಾಲಯವು ವಿಜಯನಗರ ಮತ್ತು ಹೊಯ್ಸಳ ಶೈಲಿಗಳ ಸುಂದರ ಮಿಳಿತದಿಂದ ರೂಪುಗೊಂಡ ದೇವಾ ಲಯ. ಇಲ್ಲಿ ಶಂಕರಾಚಾರ್ಯರ ಜೀವನಕ್ಕೆ ಸಂಬಂಧಿಸಿದ ಅನೇಕ ಶಿಲ್ಪಗಳಿವೆ. ಇಲ್ಲಿ ವಿಶೇಷವಾಗಿ ಶೈವ ಶಿಲ್ಪಗಳಿವೆ.

ವಿಜಯನಗರ ಕಾಲದ ದೇವಾಲಯಗಳು ಮಾತ್ರವಲ್ಲದೆ, ಅನೇಕ ಇತರ ಕಟ್ಟಡಗಳೂ ಬೆಳಕಿಗೆ ಬಂದಿವೆ. ಕಮಲಮಹಲ್, ರಾಣಿಯರ ಸ್ನಾನಗೃಹ, ಅಂತಃಪುರದ ಗೋಪುರ, ಆನೆಯ ಲಾಯ, ಕಾವಲುಗಾರ ವಸತಿಗೃಹಗಳು ಇವುಗಳಲ್ಲಿ ಮುಖ್ಯವಾದವು. ಭಾರತ ಸರಕಾರದ ಪುರಾತತ್ವ ಇಲಾಖೆಯ ವರು ಎಸ್. ಆರ್. ರಾವ್ ಅವರ ನೇತೃತ್ವದಲ್ಲಿ ಹಂಪೆಯಲ್ಲಿ ಉತ್ಖನನ ಕೈಗೊಂಡು ಈಗಾಗಲೇ ಅನೇಕ ಹೊಸ ಕಟ್ಟಡಗಳನ್ನು ಬೆಳಕಿಗೆ ತಂದಿದ್ದಾರೆ. ಈ ರೀತಿಯ ಉತ್ಖನನದಲ್ಲಿ ಪುರಂದರದಾಸರ ಶಿಲ್ಪವೂ ದೊರಕಿದೆ. ಈ ಉತ್ಖನನಗಳು ಪೂರ್ಣಗೊಂಡಮೇಲೆ, ವಿಜಯಗರದ ವಾಸ್ತುಶಿಲ್ಪ ವಿಷಯ ದಲ್ಲಿ ಇನ್ನಷ್ಟು ಹೊಸ ಬೆಳಕು ಬೀಳುವುದರಲ್ಲಿ ಸಂಶಯವಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ವಿಜಯನಗರ ವಾಸ್ತುಶಿಲ್ಪವು ಕರ್ನಾಟಕವಲ್ಲಿ ಕೊನೆಯ ಪ್ರಖ್ಯಾತವಾದ ಶಿಲ್ಪಶೈಲಿಯಾಗಿ ಕಂಗೊಳಿಸಿತು.

## ಮುಸ್ಲಿಂ ವಾಸ್ತುಶಿಲ್ಪ

ಕರ್ನಾಟಕದಲ್ಲಿ ಮಹಮ್ಮದೀಯರು ರಾಜ್ಯಸ್ಥಾಪನೆ ಮಾಡಿದನಂತರ ವಾಸ್ತುಕಲೆಯಲ್ಲಿ ಒಂದು ಕ್ರಾಂತಿಯೇ ಉಂಟಾಯಿತು. ಹಿಂದೂ ಕಲೆಯ ಪರಂಪರೆಯು ಹಿಂದೆ ಬಿದ್ದು ಮಹಮ್ಮದೀಯ ಶೈಲಿಯು ಅಭಿವೃದ್ಧಿ ಹೊಂದಿತು. ಇವರಲ್ಲಿ ಮೂರ್ತಿಪೂಜೆ ಇಲ್ಲದುದರಿಂದ, ಶಿಲ್ಪಕಲೆಯು ಬೆಳೆಯಲೇ ಇಲ್ಲ. ಅದರ ಬದಲು ವಾಸ್ತುರಚನೆಯಲ್ಲೇ ವಿವಿಧ ವಿನ್ಯಾಸ ಗಳನ್ನು ಅನುಸರಿಸಲಾಯಿತು. ಮಹಮ್ಮದೀಯ ವಾಸ್ತುವಿನಲ್ಲಿ ಮಸೀದಿ

ಗಳು, ಗೋರಿಗಳು, ಕೋಟೆಗಳು, ಮಂಟಪಗಳು, ಪುರದ್ವಾರಗಳು, ಜಲ ಮಂದಿರಗಳು, ಬಾವಿಗಳು, ಅರಮನೆಗಳು ವಿಶೇಷವಾಗಿರುತ್ತವೆ. ಕಟ್ಟಡದ ಸುತ್ತಲೂ ಸುಂದರವಾದ ಉದ್ಯಾನಗಳನ್ನು ಬೆಳೆಸುವುದೂ ಇವರ ಕಾಲದಿಂದ ಹೆಚ್ಚು ಜನಪ್ರಿಯವಾಯಿತು. ಸಾಮಾನ್ಯವಾಗಿ ಮಸೀದಿಗಳಲ್ಲಿ ಈ ಕೆಳಗಿನ ಭಾಗಗಳು ಇರುತ್ತವೆ. ಒಳಬರುವುದಕ್ಕೆ ಒಂದು ಮಹಾದ್ವಾರ (ದರವಾಜಾ); ಒಳಗೆ ಬಿಸಿಲು ಗಾಳಿ ಬರುವುದಕ್ಕೆ ಅಂಗಳ; ಧ್ಯಾನ ಮಾಡುವುದಕ್ಕೆ ಮುಂಚೆ ಕೈಕಾಲು ತೊಳೆದುಕೊಳ್ಳಲು ಕೊಳ; ಅಂಗಳದ ಅಕ್ಕಪಕ್ಕಗಳಲ್ಲಿ ಕೈಸಾಲೆ; ಮಧ್ಯದಲ್ಲಿ ದೊಡ್ಡದಾದ ಧ್ಯಾನಮಾಡುವ ಹಜಾರ; ಹಜಾರದ ಪಶ್ಚಿಮದ ಗೋಡೆಯಲ್ಲಿನ ಮಿಹರಬ್ ಗೂಡು; ಖಾಜಿಯು ಕುಳಿತುಕೊಳ್ಳುವ ಮಿಂಟಾರ್ ಎಂಬ ಕಟ್ಟೆ; ಕಟ್ಟಡದ ಮಧ್ಯದಲ್ಲೋ, ನಾಲ್ಕು ಕಡೆಗಳಲ್ಲೋ ಕಾಣುವ ಮಿನಾರ್‌ಗಳು, ಪ್ರತಿಯೊಂದು ದೊಡ್ಡ ಊರಿನಲ್ಲಿಯೂ ಒಂದು ಮುಖ್ಯ ವಾದ ಮಸೀದಿಯಿರುತ್ತದೆ. ಇದನ್ನು ಜುಮ್ಮಾ ಮಸೀದಿ ಎಂದೂ ಕರೆಯು ತ್ತಾರೆ.

ಕರ್ನಾಟಕದಲ್ಲಿ ಹದಿನಾಲ್ಕನೆಯ ಶತಮಾನದಿಂದ ಆರಂಭವಾಗಿ ಮುಸ್ಲಿಂ ಶೈಲಿಯ ವಾಸ್ತುವು ಅಭಿವೃದ್ಧಿಗೊಂಡಿತು. ಇದನ್ನು ಪೋಷಣೆ ಮಾಡಿದವ ರೆಂದರೆ ಬಹಮನಿ ದೊರೆಗಳು, ಆದಿಲ್‌ಷಾಹಿ ಮತ್ತು ಬರೀದ್‌ಷಾಹಿ ಸುಲ್ತಾ ನರು ಹಾಗೂ ಹೈದರ್ ಮತ್ತು ಟಿಪ್ಪೂ ಸುಲ್ತಾನರು. ಈ ದೊರೆಗಳ ಆಶ್ರಯ ವನ್ನು ಪಡೆದು ಕರ್ನಾಟಕದಲ್ಲಿ ಕೆಲವು ಸುಂದರವೂ, ವಿಶೇಷ ಪ್ರಸಿದ್ಧಿಯನ್ನೂ ಪಡೆದ ಕಟ್ಟಡಗಳು ಮುಸ್ಲಿಂ ವಾಸ್ತುಶೈಲಿಯಲ್ಲಿ ಕಟ್ಟಲ್ಪಟ್ಟವು. ಇವುಗಳಲ್ಲಿ ಮುಖ್ಯವಾದವುಗಳನ್ನು ಗಮನಿಸೋಣ.

**ಜಾಮೀ ಮಸೀದಿ**

ಗುಲ್ಬರ್ಗದಲ್ಲಿರುವ ಜಾಮೀ ಮಸೀದಿಯು ಸುಂದರ ಕಟ್ಟಡ. ೨೧೬ ಅಡಿ ಉದ್ದ, ೧೭೬ ಅಡಿ ಅಗಲದ ವಿಶಾಲವಾದ ಈ ಕಟ್ಟಡಕ್ಕೆ ನಾಲ್ಕು ಮೂಲೆಗಳಲ್ಲಿಯೂ ಸಣ್ಣ ಗುಮ್ಮಟಗಳೂ, ಮಧ್ಯದಲ್ಲಿ ಒಂದು ದೊಡ್ಡ ಗುಮ್ಮಟವೂ ಇದೆ. ಸಾಮಾನ್ಯವಾಗಿ ಎಲ್ಲ ಮಸೀದಿಗಳಲ್ಲಿಯೂ ಇರುವಂತೆ ಇಲ್ಲಿ ಒಳ ಅಂಗಳವಿಲ್ಲ. ಅದು ಪೂರ್ಣವಾಗಿ ಮುಚ್ಚಲ್ಪಟ್ಟಿದೆ. ಇದೊಂದು ವೈಶಿಷ್ಟ್ಯ. ಇದರ ಇನ್ನೊಂದು ವಿಶೇಷವೆಂದರೆ ೬೦ ಅಡಿ ಅಗಲದ ಮತ್ತು ೬೦೦ ಅಡಿ ಉದ್ದದ ಅಂಗಡಿ ಬೀದಿ. ಇದರ ಎರಡೂ ಕಡೆಗಳಲ್ಲಿ ಸಾಲು

ಕಮಾನುಗಳಿವೆ. ಗುಮ್ಮಟದ ಕೆಳಭಾಗದಲ್ಲಿ ನೀಲಿಬಣ್ಣದ ಹೊಳೆಯುವ ಹೆಂಚಿನ ಬಿಲ್ಲೆಗಳನ್ನು ಬಳಸಿದ್ದಾರೆ.

**ಮದರಸ**

ಬಿದರೆಯಲ್ಲಿ ಎರಡುಮಸೀದಿಗಳು, ಒಂದು ಮದರಸ, ರಂಗಿನ ಮಹಲ್, ಜನಾನಾ ಮಹಲ್, ಕೋಟೆ, ಜಲಮಂಟಪ ಮುಂತಾದವುಗಳಿವೆ. ಅವುಗಳಲ್ಲೆಲ್ಲ ಅತ್ಯಂತ ಹೆಸರುವಾಸಿಯಾದದ್ದು ಮಹಮೂದ್ ಗವಾನನು ಕಟ್ಟಿಸಿದ ಕಾಲೇಜು ಅಥವಾ ಮದರಸ, ೨೦೫ ಅಡಿ ಉದ್ದ ೧೮೦ ಅಡಿ ಅಗಲದ ವಿಶಾಲವಾದ ಈ ಕಟ್ಟಡ ಹಿಂದೆ ಒಂದು ವಿಶ್ವವಿದ್ಯಾನಿಲಯವೇ ಆಗಿತ್ತು. ಇದರಲ್ಲಿ ಭಾಷಣ ಶಾಲೆಗಳು, ಪುಸ್ತಕ ಭಂಡಾರ, ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ವಾಸಮಾಡುವ ಸ್ಥಳ, ಮಸೀದಿ ಮುಂತಾದವು ಗಳಿದ್ದವು. ಇಲ್ಲಿ ಹಸಿರು, ಹಳದಿ, ನೀಲಿ ಮುಂತಾದ ಬಣ್ಣ ಬಣ್ಣದ ಬಿಲ್ಲೆ ಗಳನ್ನು ಅಲಂಕಾರಕ್ಕಾಗಿ ಉಪಯೋಗಿಸಿದ್ದಾರೆ. ಮತ್ತೊಂದು ಗಮನಿಸ ಬೇಕಾದ ಸಂಗತಿಯೆಂದರೆ, ಗೋಡೆಗಳ ಬುಡದಲ್ಲಿ ಪಾಯದ ಮೇಲಂಗಡೆ ದಪ್ಪನಾದ ಸೀಸದ ತಗಡುಗಳನ್ನು ಇಟ್ಟು ಕಟ್ಟಲಾಗಿದೆ. ಇದರಿಂದ ತೇವವು ಮೇಲೇರದಂತೆಯೂ, ಗೆದ್ದಲು ಹುಳುಗಳು ಬರದಂತೆಯೂ ಮಾಡಲಾಗಿತ್ತು. ಸ್ವಲ್ಪ ಹಾಳಾಗಿದ್ದರೂ ಬಿದರೆಯ ಮದರಸ ಆ ಕಾಲದ ಭವ್ಯತೆಯ ಪ್ರತೀಕ ವಾಗಿದ್ದು ಮುಸ್ಲಿಂ ವಾಸ್ತುಶಿಲ್ಪದಲ್ಲಿ ಖ್ಯಾತಿ ಪಡೆದಿದೆ.

ಅಖಿಲ ಭಾರತ ಪ್ರಸಿದ್ಧಿಯನ್ನು ಪಡೆದಿರುವ ಬಿಜಾಪುರವು ಮುಸ್ಲಿಂ ವಾಸ್ತುಕೃತಿಗಳ ನಗರ. ಇಲ್ಲಿ ಆಳಿದ ಆದಿಲ್‌ಷಾಹಿ ದೊರೆಗಳು ಸುಂದರ ಕಟ್ಟಡಗಳನ್ನು ನಿರ್ಮಿಸುವುದರಲ್ಲಿ ವಿಶೇಷ ಆಸಕ್ತಿ ತೋರಿದರು. ಎಲ್ಲೆಲ್ಲಿ ನೋಡಿದರೂ, ಮಸೀದಿಗಳು, ಗುಮ್ಮಟಗಳು, ಚಾವಡಿಗಳು, ಗೋರಿಗಳು, ಮಹಲುಗಳು ಕಂಡುಬರುತ್ತವೆ. ಇಲ್ಲಿರುವ ಮಸೀದಿಗಳಲ್ಲೆಲ್ಲ ಜಾಮೀ ಮಸೀದಿಯು ಅತಿ ದೊಡ್ಡದು ಮತ್ತು ಉತ್ತಮವಾದದ್ದು. ೪೫೦ ಅಡಿ ಉದ್ದ ಮತ್ತು ೨೨೫ ಅಡಿ ಅಗಲದ ಈ ಕಟ್ಟಡದಲ್ಲಿ ಅಂದವಾದ ಅರ್ಧ ಗೋಳಾಕಾರದ ಗುಮ್ಮಟವಿದೆ. ಒಳಗೋಡೆಗಳಲ್ಲಿ ನಾಜೂಕಿನ ಅಲಂಕಾರವೂ ಇದೆ. ಇಬ್ರಾಹಿಂ ಆದಿಲ್‌ಷಾಹಿಯು ಕಟ್ಟಿಸಿದ ಇಬ್ರಾಹಿಂ ರೋಜಾ ಎಂಬ ಗೋರಿಯು ಬಲು ಸುಂದರವಾದ ಕಟ್ಟಡ. ಮುಸ್ಲಿಂ ವಾಸ್ತುಕಲೆಗೆ ಇದೊಂದು ಉತ್ತಮ ಉದಾಹರಣೆ. ಇಷ್ಟೊಂದು ವಿಶಾಲವಾದ ಜಾಗಕ್ಕೆ ಕಂಬಗಳಿಲ್ಲದೆ

ಚಪ್ಪಡಿಯನ್ನು ನಿಲ್ಲಿಸಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಇಲ್ಲಿರುವ ಕೆತ್ತನೆಯ ಕೆಲಸವು ಬಲು ನಾಜೂಕಿನದು.

**ಗೋಳಗುಮ್ಮಟ**

ಬಿಜಾಪುರದಲ್ಲಿ ಮಾತ್ರವಲ್ಲ, ಪ್ರಪಂಚದಲ್ಲೇ ಹೆಚ್ಚು ಪ್ರಸಿದ್ಧಿ ಪಡೆದಿರುವ ಕಟ್ಟಡವೆಂದರೆ ಗೋಳಗುಂಬಸ್ ಅಥವಾ ಗೋಳಗುಮ್ಮಟ. ಮಹಮ್ಮದ್ ಆದಿಲ್‌ಷಾನ (೧೬೨೭–೫೬) ಕಾಲದಲ್ಲಿ ನಿರ್ಮಿಸಲಾದ ಇದು ಅತ್ಯಂತ ವಿಶಾಲವಾದ ಕಂಬಗಳಿಲ್ಲದ ಹಜಾರವನ್ನು ಒಳಗೊಂಡಿದೆ. ಇನ್ನೂರು ಅಡಿ ಉದ್ದ, ಇನ್ನೂರು ಅಡಿ ಎತ್ತರದ ಈ ಕಟ್ಟಡದಲ್ಲಿರುವ ಗುಮ್ಮಟದ ಹೊರವ್ಯಾಸ ೧೪೪ ಅಡಿಗಳು. ಹೊರಗಿನಿಂದ ನೋಡಿದರೆ ಘನಾಕೃತಿಯ ಕಟ್ಟಡದಂತೆ ಕಾಣುತ್ತದೆ. ಆದರೆ ಒಳಭಾಗದಲ್ಲಿ ಕಮಾನುಗಳನ್ನು ಒಂದಕ್ಕೊಂದು ಅಡ್ಡಲಾಗಿ ಬರುವಂತೆ ಬಳಸಿ ಅಷ್ಟಕೋನಾಕಾರದ ಮೊಗಸಾಲೆಯನ್ನು ನಿರ್ಮಿಸಿದ್ದಾರೆ. ಇಂಜಿನಿಯರಿಂಗ್ ದೃಷ್ಟಿಯಿಂದ ಪ್ರಪಂಚದಲ್ಲೇ ಇದೊಂದು ಆಶ್ಚರ್ಯದ ಕಟ್ಟಡ. ಮೊಗಸಾಲೆಯ ಹಿಂದುಗಡೆ ಪಿಸುಮಾತನಾಡಿದರೂ ಎದುರಿನ ಗೋಡೆಯಲ್ಲಿ ನಿಂತಿರುವವರು ಸ್ಪಷ್ಟವಾಗಿ ಕೇಳಬಹುದು ಆದುದರಿಂದ ಇದನ್ನು ಪಿಸುಮಾತಿನ ಮೊಗಸಾಲೆ ಎಂದೂ ಕರೆಯುತ್ತಾರೆ. ಒಂದು ಗುಂಡುಸೂಜಿಯನ್ನು ಕೆಳಕ್ಕೆ ಹಾಕಿದರೂ, ಅದರ ಶಬ್ದವನ್ನು ಕೇಳಬಹುದು. ಈ ಗುಮ್ಮಟವು ಇಂದಿಗೂ ಪ್ರತಿನಿತ್ಯವೂ ಸಾವಿರಾರು ಪ್ರವಾಸಿಗರನ್ನು ಆಕರ್ಷಿಸುತ್ತಿದೆ. ಇನ್ನೊಂದು ಸುಂದರ ಕಟ್ಟಡವೆಂದರೆ ಮೆಹತರ್ ಮಹಲ್. ಇವುಗಳಲ್ಲದೆ ಸಾತ್ ಮಂಜೀಲ್, ತಾಜ್ ಬಾವಡಿ, ಗಗನ ಮಹಲ್, ಅಸರಮಹಲ್, ಆನಂದ ಮಹಲ್, ಚಾಂದ್ ಬಾವಡಿ ಮುಂತಾದ ವಾಸ್ತುಕೃತಿಗಳೂ ಬಿಜಾಪುರದಲ್ಲಿವೆ.

**ದರಿಯಾ ದೌಲತ್**

ಈ ಸುಲ್ತಾನರ ಕಾಲದನಂತರ ಮುಸ್ಲಿಂ ವಾಸ್ತುವನ್ನು ಪೋಷಿಸಿದವರು ಹೈದರ್ ಮತ್ತು ಟಿಪ್ಪೂಸುಲ್ತಾನರು. ಶ್ರೀರಂಗಪಟ್ಟಣದಲ್ಲಿರುವ ದರಿಯಾ ದೌಲತ್ ಟಿಪ್ಪೂವಿನ ವಿಶ್ರಾಂತಿಯ ಅರಮನೆಯಾಗಿದ್ದಿತು. ಎತ್ತರವಾದ ಜಗಲಿಯ ಮೇಲೆ ಕಟ್ಟಲ್ಪಟ್ಟ ಇದರ ಸುತ್ತಲೂ ಸುಂದರವಾದ ಉದ್ಯಾನವಿದೆ. ಮೇಲಿನ ಅಂತಸ್ತಿನಲ್ಲಿ ಸುಲ್ತಾನನ ಮತ್ತು ಜನಾನಾ ಕೊಠಡಿಗಳಿವೆ. ಕೆಳಗಡೆ ದೊಡ್ಡ ದರ್ಬಾರು ಸಭಾಂಗಣವಿದೆ. ಇಲ್ಲಿ ಟಿಪ್ಪೂಸುಲ್ತಾನನು ಬ್ರಿಟಿಷರೊಡನೆ

ಮಾಡಿದ ಯುದ್ಧಗಳು ವರ್ಣದಲ್ಲಿ ಚಿತ್ರಿತವಾಗಿವೆ. ಅನೇಕ ಕಂಬಗಳು ಚಿನ್ನದ ಮುಲಾಮಿನಿಂದ ಅಲಂಕರಿಸಲ್ಪಟ್ಟಿವೆ. ಗಂಜಾಮಿನಲ್ಲಿರುವ ಗುಂಬಜ್‌ನಲ್ಲಿ ಸುಂದರವಾದ ಕರಿಕಲ್ಲಿನ ಕಂಬಗಳುಳ್ಳ ಹೈದರ್ ಮತ್ತು ಟಿಪ್ಪೂವಿನ ಗೋರಿಗಳಿವೆ. ಬೆಂಗಳೂರಿನಲ್ಲಿರುವ ಟಿಪ್ಪೂ ಸುಲ್ತಾನನ ಅರಮನೆಯೂ ಸುಂದರವಾದ ಕಟ್ಟಡ. ಇವುಗಳಲ್ಲದೆ ಶಿರಾದಲ್ಲಿಯೂ ಈ ಕಾಲದ ಕೆಲವು ಕಟ್ಟಡಗಳಿವೆ.

ವಿಜಯನಗರದ ಪತನಾನಂತರ, ಪಾಳೆಯಗಾರರು, ನಾಯಕರು, ಕರ್ನಾಟಕದ ವಿವಿಧ ಭಾಗಗಳಲ್ಲಿ ಆಳಿದರು. ಇವರುಗಳು ವಿಜಯನಗರ ವಾಸ್ತುಶಿಲ್ಪ ಶೈಲಿಯನ್ನೇ ಅನುಸರಿಸಿ ಅನೇಕ ದೇವಾಲಯಗಳನ್ನು ಕಟ್ಟಿಸಿದರು ಮತ್ತು ಅನೇಕ ಹಳೆಯ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದರು. ಮೈಸೂರು ಒಡೆಯರ ಕಾಲದಲ್ಲಿಯೂ ಈ ರೀತಿಯ ಕಲೆಯು ಬೆಳೆಯಿತು. ಆದರೆ ಇವುಗಳಲ್ಲಿ ಹಿಂದಿನ ಕಲೆಯ ಸೌಂದರ್ಯವಾಗಲೀ, ಮಹತ್ತಾಗಲೀ ಕಾಣಬರುವುದಿಲ್ಲ. ಹೀಗಾಗಿ ಈ ಪ್ರಾಚೀನ ಕಲೆಯು ತನ್ನ ಪ್ರಾಮುಖ್ಯವನ್ನು ಕಳೆದುಕೊಂಡು ಆಧುನಿಕ ಕಟ್ಟಡಗಳಿಗೆ ಎಡೆಮಾಡಿಕೊಟ್ಟಿತು.

## ನಾಣ್ಯಶಾಸ್ತ್ರ

ನಾಣ್ಯಶಾಸ್ತ್ರ ಅಧ್ಯಯನದಲ್ಲಿ ಕರ್ನಾಟಕವು ವಿಶೇಷ ಪ್ರಗತಿಯನ್ನು ಸಾಧಿಸಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಸುಮಾರು ಎರಡು ಸಾವಿರ ವರುಷಗಳ ದೀರ್ಘ ಇತಿಹಾಸವಿದ್ದರೂ ಸಾವಿರಾರು ನಾಣ್ಯಗಳು ಇಲ್ಲಿ ಬಳಕೆಯಲ್ಲಿದ್ದರೂ ಆಗಿರುವ ಅಧ್ಯಯನ ಕಡಿಮೆ. ಮೊದಲಿನಿಂದಲೂ ಮೈಸೂರು ಪುರಾತತ್ವ ಇಲಾಖೆಯು ಶಾಸನಗಳಿಗೆ ವಿಶೇಷವಾಗಿ ಗಮನಕೊಟ್ಟಿತು. ರೈಸ್ ಅವರು ಬೆಂಗಳೂರಿನಲ್ಲಿ ದೊರಕಿದ ರೋಮನ್ ನಾಣ್ಯಗಳನ್ನು ಕುರಿತು ಬರೆದ ಲೇಖನವನ್ನು ಬಿಟ್ಟರೆ, ಮಿಕ್ಕೆಲ್ಲ ಅವರ ಅಧ್ಯಯನಗಳೂ ಶಾಸನಗಳಿಗೆ ಸಂಬಂಧಿಸಿದುದು. ಅವರ ಅನಂತರ ಬಂದ ನರಸಿಂಹಾಚಾರ್ಯರು ನಾಣ್ಯರಾಶಿಗಳನ್ನು ಗಮನಿಸಿ, ಅವರ ವಾರ್ಷಿಕ ವರದಿಗಳಲ್ಲಿ ಅವುಗಳ ಬಗೆಗೆ ಟಿಪ್ಪಣಿಗಳನ್ನು ಬರೆದರು. ನಿಜವಾಗಿಯೂ ನಾಣ್ಯಶಾಸ್ತ್ರಕ್ಕೆ ವಿಶೇಷ ಗಮನ ಕೊಟ್ಟವರೆಂದರೆ ಎಂ.ಎಚ್. ಕೃಷ್ಣ ಅವರು. ಇವರು ದಕ್ಷಿಣ ಭಾರತದ ನಾಣ್ಯಗಳನ್ನು ಕುರಿತು ವಿಶೇಷ ಸಂಶೋಧನೆಯನ್ನು ನಡೆಸಿದರು. ಅದರ ಫಲವಾಗಿ ಹೊರಬಿದ್ದ ಕರ್ನಾಟಕದ ನಾಣ್ಯಗಳನ್ನು ಕುರಿತಾದ ಸಂಶೋಧನೆಗಳನ್ನು ಮೈಸೂರು ಪುರಾತತ್ವ ಇಲಾಖೆಯ ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿದರು. ಇವೇ ಕರ್ನಾಟಕ

ನಾಣ್ಯಶಾಸ್ತ್ರಕ್ಕೆ ಮೂಲಭೂತವಾದ ಅಧ್ಯಯನ ಸಾಮಗ್ರಿಗಳು ಮತ್ತು ಆಕರಗಳು. ಇತ್ತೀಚೆಗೆ ಎ. ವಿ. ನರಸಿಂಹಮೂರ್ತಿಯವರು 'ಕರ್ನಾಟಕ ನಾಣ್ಯಗಳು' ಎಂಬ ಗ್ರಂಥವನ್ನು ಇಂಗ್ಲಿಷ್ ಭಾಷೆಯಲ್ಲಿಯೂ, 'ಕರ್ನಾಟಕ ನಾಣ್ಯಸಂಪತ್ತು' ಎಂಬ ಸಣ್ಣ ಪುಸ್ತಿಕೆಯನ್ನು ಕನ್ನಡದಲ್ಲಿಯೂ ಪ್ರಕಟಿಸಿದ್ದಾರೆ. ಕರ್ನಾಟಕ ನಾಣ್ಯ ಪರಂಪರೆಯನ್ನು ಆಮೂಲಾಗ್ರವಾಗಿ ವಿವೇಚಿಸುವ ಮೊಟ್ಟಮೊದಲನೆಯ ಗ್ರಂಥವಿದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಂಥ ಪ್ರಕಟವಾದನಂತರ ಹತ್ತಾರು ನಾಣ್ಯರಾಶಿಗಳು ಬೆಳಕಿಗೆ ಬಂದಿವೆ. ಅವು ಈಗಲೂ ದೊರೆಯುತ್ತಲಿವೆ. ಆದುದರಿಂದ ಆಗಿಂದಾಗ್ಗೆ ನಾಣ್ಯರಾಶಿಗಳನ್ನು ಗಮನಿಸಿ, ಹೊಸ ವಿಷಯಗಳನ್ನು ಸೇರಿಸಬೇಕಾದ ಅವಶ್ಯಕತೆಯನ್ನು ಒತ್ತಿ ಹೇಳಬೇಕಾದ್ದಿಲ್ಲ.

ಕ್ರಿಸ್ತಶಕದ ಪ್ರಾರಂಭದ ಹೊತ್ತಿಗೆ ಕರ್ನಾಟಕದಲ್ಲಿ ಮುದ್ರಾಂಕಿತ ನಾಣ್ಯಗಳು ಬಳಕೆಯಲ್ಲಿದ್ದವು. ಇವು ವಿವಿಧ ಆಕಾರದ ತಾಮ್ರ, ಬೆಳ್ಳಿ ಮತ್ತು ಚಿನ್ನದ ಚೂರುಗಳು. ಇವುಗಳ ಮೇಲೆ ಅಕ್ಷರಗಳಿರುವುದಿಲ್ಲ. ಆದರೆ ನದಿ, ಮರ, ಬೆಟ್ಟ, ಆನೆ, ಕುದುರೆ ಮುಂತಾದ ಚಿಹ್ನೆಗಳು ಪಂಚ್ ಮಾಡಲ್ಪಟ್ಟಿರುತ್ತವೆ. ಆದುದರಿಂದ ಇವನ್ನು ಪಂಚ್ ಚಿಹ್ನೆಯ ನಾಣ್ಯಗಳು ಎಂದೂ ಕರೆಯುವುದುಂಟು. ಇವು ಉತ್ತರ ಭಾರತದಲ್ಲಿ ಬಳಕೆಯಲ್ಲಿದ್ದು, ಅಲ್ಲಿಂದ ಕರ್ನಾಟಕಕ್ಕೂ ಬಂದವು. ಈ ರೀತಿಯ ನಾಣ್ಯಗಳು ಬನವಾಸಿ, ವಡಗಾಂವ್ ಮಾಧವಪುರ, ಧಾರವಾಡ ಮುಂತಾದ ಕಡೆಗಳಲ್ಲಿ ಸಿಕ್ಕಿವೆ.

ನಂತರ ಕರ್ನಾಟಕವು ಸಾತವಾಹನರ ಮತ್ತು ಅವರ ಅಧೀನರಾಜರ ಆಳ್ವಿಕೆಗೆ ಒಳಪಟ್ಟಿದ್ದಿತು. ಈ ರಾಜರ ಆಳ್ವಿಕೆಯಲ್ಲಿ ವಿಶೇಷವಾಗಿ ಸೀಸದ ನಾಣ್ಯಗಳು ಬಳಕೆಗೆ ಬಂದವು. ಬೆಳ್ಳಿಯ ಮತ್ತು ತಾಮ್ರದ ನಾಣ್ಯಗಳು ಕಡಿಮೆ. ಇವು ನೋಡಲು ಸುಂದರವಾಗಿರುವುದಿಲ್ಲ. ಈ ನಾಣ್ಯಗಳ ಒಂದು ಮುಖದಲ್ಲಿ ರಾಜನ ಚಿತ್ರ, ಮತ್ತೊಂದು ಮುಖದಲ್ಲಿ ಆನೆ, ಕುದುರೆ, ಸಿಂಹ, ಬಿಲ್ಲು, ಬಾಣ ಮುಂತಾದ ಚಿಹ್ನೆಗಳಿರುತ್ತವೆ. ಚಿತ್ರದುರ್ಗದಲ್ಲಿ ಆಳಿದ ಮಹಾರಥಿಗಳು ಮತ್ತು ಚುಟುವಂಶದ ರಾಜರುಗಳ ನಾಣ್ಯವೂ ಸೀಸದಿಂದ ಮಾಡಿದವು. ಇವೂ ಸಾತವಾಹನ ನಾಣ್ಯವನ್ನೇ ಹೋಲುತ್ತವೆ. ಇವು ಕಾರವಾರ, ಚಿತ್ರದುರ್ಗ, ಬನವಾಸಿ ಮತ್ತು ಚಂದ್ರವಳ್ಳಿಗಳಲ್ಲಿ ದೊರಕಿವೆ.

ಇದೇ ಸಮಯದಲ್ಲಿ ಕರ್ನಾಟಕಕ್ಕೂ ರೋಮ್ ದೇಶಕ್ಕೂ ವಿಶೇಷ






ಪಂಚ್ ಮಾರ್ಕ್ ನಾಣ್ಯಗಳು (ಬೆಳ್ಳಿ)

ಸಂಪರ್ಕಗಳಿದ್ದವು. ರೋಮಿನ ಹೆಂಗಸರಿಗೆ ಇಲ್ಲಿ ದೊರಕುತ್ತಿದ್ದ ಪಚ್ಚೆಯನ್ನು ಕಂಡರೆ ಬಹಳ ಇಷ್ಟ. ಅದನ್ನು ಎಷ್ಟು ಚಿನ್ನದ ನಾಣ್ಯಗಳನ್ನಾದರೂ ಕೊಟ್ಟು ಕೊಂಡುಕೊಳ್ಳುತ್ತಿದ್ದರು. ಅದೇ ರೀತಿಯಲ್ಲಿ ರೋಮಿನ ಜನಗಳಿಗೆ ಕರ್ನಾಟಕ ದಲ್ಲಿ ಬೆಳೆಯುತ್ತಿದ್ದ ಮೆಣಸು ಬಹಳ ಪ್ರಿಯವಾಗಿದ್ದಿತು. ಇದರಿಂದ ಈ ಎರಡು ರಾಜ್ಯಗಳಿಗೂ ವ್ಯಾಪಾರ ಸಂಬಂಧಗಳು ಹೆಚ್ಚಿದವು. ರೋಮಿನ ಚಿನ್ನದ ಮತ್ತು ಬೆಳ್ಳಿಯ ನಾಣ್ಯಗಳು ಕರ್ನಾಟಕಕ್ಕೆ ಹೇರಳವಾಗಿ ಬರತೊಡಗಿ ದವು. ಈ ರೀತಿಯ ರೋಮನ್ ನಾಣ್ಯಗಳು ಬೆಂಗಳೂರು, ಚಂದ್ರವಳ್ಳಿ, ಅಕ್ಕಿ ಆಲೂರು ಮುಂತಾದ ಕಡೆಗಳಲ್ಲಿ ದೊರಕಿವೆ.

ಕರ್ನಾಟಕ ಸಂಸ್ಕೃತಿಯನ್ನು ವಿಶೇಷವಾಗಿ ಪೋಷಿಸಿದ ಬನವಾಸಿ ಕದಂಬರು ಪದ್ಮಟಂಕ ಎಂಬ ಚಿನ್ನದ ನಾಣ್ಯಗಳನ್ನು ಅಚ್ಚು ಮಾಡಿದರು. ಮಧ್ಯದಲ್ಲಿ ಪದ್ಮದ ಚಿನ್ಹೆಯಿರುವ ಚಿನ್ನದ ಚೂರುಗಳೇ ಈ ನಾಣ್ಯಗಳು. ಕೆಲವು ನಾಣ್ಯಗಳು ಶಂಖ, ಚಕ್ರ, ಬಿಲ್ಲು ಮುಂತಾದ ಚಿನ್ಹೆಗಳೂ ಇರುತ್ತವೆ. ಅನಂತರ ಆಳಿದ ತಲಕಾಡಿನ ಗಂಗರ ಚಿನ್ನದ ಮತ್ತು ತಾಮ್ರದ ನಾಣ್ಯಗಳಲ್ಲಿ ಮುಂಭಾಗದಲ್ಲಿ ಇವರ ಲಾಂಛನವಾದ ಆನೆಯ ಚಿತ್ರವೂ, ಹಿಂಭಾಗದಲ್ಲಿ ಹೂವಿನ ಚಿತ್ರವೂ ಇರುತ್ತವೆ. ಆದರೆ ರಾಜನ ಹೆಸರು ಬರೆದಿರುವ ಇವರ ನಾಣ್ಯಗಳು ಈವರೆಗೆ ದೊರಕಿಲ್ಲ.

ಬಾದಾಮಿ ಚಾಲುಕ್ಯರು ತಮ್ಮ ನಾಣ್ಯಗಳ ಮೇಲೆ ರಾಜನ ಹೆಸರನ್ನು ಬರೆಯಿಸುವ ಪದ್ಧತಿಯನ್ನು ಬಳಕೆಗೆ ತಂದರು. ಇವರ ಚಿನ್ನದ ಮತ್ತು ಬೆಳ್ಳಿಯ ನಾಣ್ಯಗಳ ಮೇಲೆ ಒಂದು ಮುಖದಲ್ಲಿ ರಾಜನ ಹೆಸರು ಮತ್ತು ಬಿರುದುಗಳು, ಮತ್ತೊಂದು ಕಡೆಯಲ್ಲಿ ವರಾಹದ ಚಿನ್ಹೆಯೂ ಇರುತ್ತವೆ. ವರಾಹವು ಇವರ ರಾಜಲಾಂಛನ. ಸುಮಾರು ನೂರಿಪ್ಪತ್ತು ಗ್ರೇನ್ ತೂಕದ

ಶ್ರೀ ವಿಕ್ರಮ ಮಹಾರಾಜ ಎಂಬ ಬರಹವುಳ್ಳ ವಿಕ್ರಮಾದಿತ್ಯನ ನಾಣ್ಯಗ ಬೆಳಕಿಗೆ ಬಂದಿವೆ. ರಾಷ್ಟ್ರಕೂಟರ ಕಾಲದಲ್ಲಿ ಗದ್ಯಾಣ, ಸುವರ್ಣ, ದ್ರಮ್ಮ ಕಳಂಜು ಮುಂತಾದ ನಾಣ್ಯಗಳು ಬಳಕೆಯಲ್ಲಿದ್ದವು ಎಂದು ಶಾಸನಗಳಿಂ ತಿಳಿದುಬರುತ್ತದೆ. ಆದರೆ ಈವರೆಗೆ ಇವರ ಒಂದು ನಾಣ್ಯವೂ ಸಿಕ್ಕಿಲ್ಲ ಕಲ್ಯಾಣದ ಚಾಲುಕ್ಯರು ತಮ್ಮ ನಾಣ್ಯಗಳಿಗೆ ವಿಶೇಷ ಗಮನ ಕೊಟ್ಟರು ಇವರ ಚಿನ್ನದ ನಾಣ್ಯಗಳಲ್ಲಿ ರಾಜನ ಹೆಸರು ಮತ್ತು ಬಿರುದು ಇರುತ್ತವ ಜಗದೇಕಮಲ್ಲ, ತ್ರೈಲೋಕ್ಯಮಲ್ಲ, ಭೂಲೋಕಮಲ್ಲ ಮುಂತಾದ ಬಿರುದ ಗಳನ್ನುಳ್ಳ ನಾಣ್ಯಗಳು ವಿಶೇಷವಾಗಿ ದೊರಕಿವೆ. ಇವರ ಕಾಲದಲ್ಲಿ ಗದ್ಯಾಣ ಹೊನ್ನು, ಪಣ, ವೀಸ, ಹಾಗ, ಬೇಳೆ ಎಂಬ ನಾಣ್ಯಗಳು ಚಲಾವಣ ಯಲ್ಲಿದ್ದವು.

ಹೊಯ್ಸಳರ ಕಾಲದಲ್ಲಿ, ವಿಷ್ಣುವರ್ಧನನು ಸುಂದರವಾದ ಚಿನ್ನದ ನಾಣ್ಯಗಳನ್ನು ಟಂಕಿಸಿದನು. ಇವನ ನಾಣ್ಯಗಳಲ್ಲಿ ಒಂದು ಕಡೆ ಇವ ಬಿರುದುಗಳಾದ ತಲಕಾಡುಗೊಂಡ, ನೊಳಂಬವಾಡಿಗೊಂಡ ಎಂಬ ಬರಹ ಗಳೂ, ಇನ್ನೊಂದು ಕಡೆ, ದುರ್ಗಿಯ ಚಿತ್ರವೂ ಇರುತ್ತವೆ. ಹೊಯ್ಸಳ ಸಮಕಾಲೀನರೇ ಆದ ಸೇವುಣರ ನಾಣ್ಯಗಳು ಪದ್ಮಟಂಕಗಳು. ಇವುಗ ಮೇಲೆ ಅಷ್ಟದಳದ ಪದ್ಮದ ಜೊತೆಗೆ ಸಿಂಘಣ, ಭಿಲ್ಲಮ, ಕೃಷ್ಣ, ರಾಮ ಚಂದ್ರ ಮುಂತಾದ ರಾಜರ ಹೆಸರುಗಳು ನಾಗರೀ ಲಿಪಿಯಲ್ಲಿರುತ್ತವೆ. ಗೋವ ಯಲ್ಲಿ ಆಳಿದ ಕದಂಬರ ನಾಣ್ಯಗಳು ವಿಶೇಷವಾಗಿ ದೊರಕಿವೆ. ಇವರ ಚಿನ್ನದ ನಾಣ್ಯಗಳಲ್ಲಿ ಮುಂಭಾಗದಲ್ಲಿ ಸಿಂಹದ ಚಿತ್ರ, ಅದರ ಪಕ್ಕದಲ್ಲಿ ಸಂವತ್ಸರದ ಹೆಸರು ಇರುತ್ತವೆ. ಹಿಂಭಾಗದಲ್ಲಿ ರಾಜನ ಹೆಸರು ಇರುತ್ತದೆ.

**ಸುವರ್ಣಯುಗ**

ವಿಜಯನಗರ ಕಾಲಕ್ಕೆ ಬಂದರೆ ಕರ್ನಾಟಕದ ಸುವರ್ಣಯುಗ ಆರಂಭ ವಾಗುತ್ತದೆ. ವೈವಿಧ್ಯಪೂರ್ಣವೂ ಸುಂದರವೂ ಆದ ಈ ಕಾಲದ ಚಿನ್ನದ ನಾ ಗಳು ಹೇರಳವಾಗಿ ದೊರಕಿವೆ. ವಿಜಯನಗರದ ಸಂಗಮ, ಸಾಳುವ, ತ ರವೀಡು ಮನೆತನದ ರಾಜರು ತಮ್ಮದೇ ಆದ ದೇವತೆಗಳ ಚು ಮಾಡಿದರು. ಗರುಡ, ಹನುಮಂತ, ರ, ಲಕ್ಷ್ಮೀನಾರಾಯಣ, ಸರಸ್ವತಿ, ಮುಂಡ ಮುಂತಾದ ಶೈವ ಮತ್ತು

